॥ ಓಂ ॥

ಶ್ರೀ ಗಣೇಶಾಯ ನಮಃ



# ಉಪನಯನ ಮಂತ್ರಾರ್ಥ ದೀಪಿಕಾ

(ಅರ್ಥ ಮತ್ತು ಟೀಕಾ ಸಹಿತ)

*

ಲೇಖಕರು :

ಬನವತಿ ರಾಮಕೃಷ್ಣ ಶಾಸ್ತ್ರಿಗಳು

* 

ಬನವತಿ ಗ್ರಂಥಮಾಲ

ನಂ. 27, (ಹೊಸ ನಂ. 53) 6ನೇ ರಸ್ತೆ, ಈಜುವ ಕೊಳದ ಬಡಾವಣೆ

ಮಲ್ಲೇಶ್ವರಂ, ಬೆಂಗಳೂರು-3

॥ ಓಂ ॥

ಶ್ರೀ ಗಣೇಶಾಯ ನಮಃ



# ಉಪನಯನ ಮಂತ್ರಾರ್ಥ ದೀಪಿಕಾ

( ಅರ್ಥ ಮತ್ತು ಟೀಕಾ ಸಹಿತ )


ಲೇಖಕರು :

ಬನವತಿ ರಾಮಕೃಷ್ಣ ಶಾಸ್ತ್ರಿಗಳು



ಬನವತಿ ಗ್ರಂಥಮಾಲ

ನಂ. 27, (ಹೊಸ ನಂ. 53) 6ನೇ ರಸ್ತೆ, ಈಜುವ ಕೊಳದ ಬಡಾವಣೆ

ಮಲ್ಲೇಶ್ವರಂ, ಬೆಂಗಳೂರು-೩

# ಉಪನಯನ ಮಂತ್ರಾರ್ಥ ದೀಪಿಕಾ

ಪ್ರಥಮ ಮುದ್ರಣ—೧೯೭೫ (೧೦೦೦ ಪ್ರತಿಗಳು)
ದ್ವಿತೀಯ ಮುದ್ರಣ—೧೯೯೧ (೨೦೦೦ ಪ್ರತಿಗಳು)

**UPANAYANA MANTRARTHA DEEPIKA - 1991**

*By :* B. **S. Ramakrishna Sastry**
27, 6th Cross, Swimmingpool Extn, Malleswaram, B-3.



ಬನವತಿ ಗ್ರಂಥಮಾಲಾ-೫

ಮುದ್ರಣ :
ರಾಜ್ ಕಮಲ್ ಪ್ರೆಸ್
ಕಾಟನ್‌ಪೇಟೆ, ಬೆಂಗಳೂರು-53
Phone—620 650

# ಮುನ್ನುಡಿ

## ( ಪ್ರಥಮ ಮುದ್ರಣ )

ಉಪನಯನವನ್ನು ಬ್ರಾಹ್ಮಣನಿಗೆ ಗರ್ಭಾಷ್ಟಮದಲ್ಲಿ ಅಂದರೆ ಆರು, ಏಳು ಎಂಟನೇ ವರ್ಷದಲ್ಲಿ ಮಾಡಬೇಕೆಂದು ಸೂತ್ರಕಾರರು ವಿಧಿಸಿರುತ್ತಾರೆ. ಇದು ಮುಖ್ಯ ಕಾಲ. ಕಾರಣಾಂತರದಿಂದ ಈ ಕಾಲವು ತಪ್ಪಿದಲ್ಲಿ, ಹದಿನಾರು ವರ್ಷಗಳ ಒಳಗಾದರೂ ಈ ಉಪನಯನ ಸಂಸ್ಕಾರವನ್ನು ಮಾಡಬೇಕು. ಇದು ಗೌಣಕಾಲ. ಇದೂ ಮೀರಿದರೆ ಅನುಕ್ತ ಕಾಲವು ಪ್ರಾಪ್ತವಾಗಿ ಅಧಮಕಾಲವಾಗುವುದರಿಂದ ಈ ಕಾಲವನ್ನು ಮೀರಬಾರದು. ಮುಖ್ಯ ಕಾಲದಲ್ಲಿ ಆಚರಿಸುವ ಕರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯವಿರುವುದರಿಂದ ಸಾಧ್ಯವಾದಷ್ಟೂ ಮುಖ್ಯ ಕಾಲದಲ್ಲಿಯೇ ಉಪನಯನಗಳನ್ನು ಮಾಡಿ ಶ್ರೇಯೋವಂತರಾಗುವುದು ಶ್ರೇಯಸ್ಕರ.

ಉಪನಯನವೆಂದರೆ ಆಚಾರ್ಯನು ವಿದ್ಯಾರ್ಥಿಯಾದ ಶಿಷ್ಯನಿಗೆ ವೇದೋಕ್ತವಾದ ಸಂಸ್ಕಾರಪೂರ್ವಕ ಗಾಯತ್ರೀ ಉಪದೇಶದ ನಿಮಿತ್ತವಾಗಿ ತನ್ನ ಹತ್ತಿರ ಕರೆದುಕೊಳ್ಳುವುದಕ್ಕೆ ಉಪನಯನವೆಂದು ಆಪಸ್ತಂಬರು ಹೇಳುತ್ತಾರೆ. ಮತ್ತು ಈ ಉಪನಯನ ಸಂಸ್ಕಾರದಿಂದ ಎರಡನೆಯ ಜನ್ಮ ಪ್ರಾಪ್ತಿಯಾಗುತ್ತದೆ. ಈ ಎರಡನೆಯ ಜನ್ಮಕ್ಕೆ ಸಾವಿತ್ರೀ ದೇವಿಯು ತಾಯಿ. ಆಚಾರ್ಯನೇ ತಂದೆ ಎಂಬುದಾಗಿ ಉಕ್ತವಾಗಿದೆ.

ಬ್ರಾಹ್ಮಣನಾದವನು ನಲವತ್ತು ಸಂಸ್ಕಾರಗಳಿಂದ ಸಂಸ್ಕರಿಸಲ್ಪಟ್ಟವನೇ ಬ್ರಹ್ಮಸಾಯುಜ್ಯವನ್ನು ಸೇರುತ್ತಾನೆಂದು ಸ್ಮೃತಿಕಾರರ ಅಭಿಪ್ರಾಯವಿರುವುದರಿಂದ ಈ ಸಂಸ್ಕಾರಗಳಿಂದಲೇ ಬ್ರಾಹ್ಮಣ ಪ್ರಸಿದ್ಧಿಯಾಗಬೇಕು. ಹೇಗೆಂದರೆ ಉದಾಹರಣೆಗಾಗಿ ಹೀಗೆ ಹೇಳುತ್ತಾರೆ :

ಒಂದು ಚಿತ್ರವು ಪೂರ್ತಿಯಾಗಬೇಕಾದಲ್ಲಿ ಅನೇಕವಾಗಿರತಕ್ಕಂಥ ಅಂಗಾಂಗಗಳ ರಚನೆಯಿಂದ ಚಿತ್ರವು ಪೂರ್ಣವಾಗಿ ಮಹತ್ವವನ್ನು ಹೇಗೆ ಹೊಂದುತ್ತದೆಯೋ ಅದರಂತೆ ವಿಧಿಪೂರ್ವಕವಾದ ಪೂರ್ವ ಸಂಸ್ಕಾರಗಳಿಂದ

ಬ್ರಾಹ್ಮಣ್ಯವು ಮಹತ್ವಪೂರ್ಣವಾಗಿ ಗರ್ಭದೋಷ, ಬೀಜದೋಷಗಳನ್ನು ಹೋಗಲಾಡಿಸುವುದರಿಂದ ಈ ಸಂಸ್ಕಾರಗಳು ಶ್ರೇಯಸ್ಸಾಧನವೆಂಬುದು ನಿರ್ವಿವಾದವಾಗಿರುತ್ತದೆ.

ಎಲ್ಲಾ ಸಂಸ್ಕಾರಗಳಲ್ಲೂ ದ್ವಿಜತ್ವ ಸಿದ್ಧಿಯಾಗುವ ಈ ಉಪನಯನ ಸಂಸ್ಕಾರವನ್ನು ಸಕಾಲದಲ್ಲಿ ನೆರವೇರಿಸಿ ಅದರ ಫಲವನ್ನು ಹೊಂದುವವರ ಉಪಯೋಗಕ್ಕಾಗಿ ಮಂತ್ರಗಳ ತಾತ್ಪರ್ಯವನ್ನು ಬರೆದು, ಸಂಪ್ರದಾಯ ಗಳನ್ನು ವಿವರಿಸಿರುವುದರಿಂದ ಉಪನಯನದಲ್ಲಿ ಮಾಡಬೇಕಾದ ಅನೇಕ ವಿಷಯಗಳನ್ನು ಮತ್ತು ಮಂತ್ರಾರ್ಥವನ್ನು ಸಹ ಗ್ರಹಿಸಿ ಕರ್ಮಾನುಷ್ಠಾನ ಮಾಡಿದಲ್ಲಿ ವಿಶೇಷ ಫಲ ದೊರಕುತ್ತದಲ್ಲದೆ, ಪ್ರಯೋಗ ಮಾಡಿಸುವವರೂ ಸಹ ಈ ಗ್ರಂಥದ ಉಪಯೋಗವನ್ನು ಪಡೆದಲ್ಲಿ ಈ ಗ್ರಂಥದ ಸಾರ್ಥಕ್ಯ ವುಂಟಾಗಿ ನನ್ನ ಶ್ರಮ ಸಾರ್ಥಕವಾಗುತ್ತದೆಂದು ಭಾವಿಸುತ್ತೇನೆ.

ಈ ಗ್ರಂಥದ ಮೊದಲನೆಯ ಮುದ್ರಣ ಕಾರ್ಯಕ್ಕೆ ನೆರವಾದ ಬನವತಿ ಮುದ್ರಣಾಲಯದ ಬ. ರಾ. ಶ್ರೀನಾಥರಿಗೂ, ಮಧು ಮುದ್ರಣಾಲಯದ ಬಿ. ವಿ. ಕೃಷ್ಣಮೂರ್ತಿಯವರಿಗೂ, ಹೆಚ್. ರಾಮರಾಯರಿಗೂ, ಜಿ. ಆತ್ಮಾರಾಂಪವಂಗೂ, ಗಂಗಾಧರರವರಿಗೂ, ಶ್ರೀನಿವಾಸಮೂರ್ತಿಯವರಿಗೂ, ಲಕ್ಷ್ಮೀನಾರಾಯಣರವರಿಗೂ, ಕೋದಂಡಪಾಣಿಯವರಿಗೂ ಸಹ ನನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ಈಗ ಈ ದ್ವಿತೀಯ ಮುದ್ರಣದ ಪುಸ್ತಕವನ್ನು ಅಂದವಾಗಿ ಮುದ್ರಿಸಿ ಕೊಟ್ಟಿರುವ ಬೆಂಗಳೂರು-53, ಅರಳೇಪೇಟೆಯಲ್ಲಿರುವ "ರಾಜಕಮಲ್ ಪ್ರೆಸ್" ಮಾಲೀಕರಿಗೂ ಹಾಗೂ ಅವರ ಪ್ರೆಸ್ ಬಳಗದವರಿಗೂ ಸಹ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

ಇತಿ ಗ್ರಂಥಕರ್ತ

ಬಿ. ಎಸ್. ರಾಮಕೃಷ್ಣ ಶಾಸ್ತ್ರೀ

॥ ಶ್ರೀ ಗಣೇಶಾಯ ನಮಃ ॥



# ಶ್ರೀ ಉಪನಯನ ಮಂತ್ರಾರ್ಥ ದೀಪಿಕಾ

ಪ್ರಣಮ್ಯ ಮಾತರಂ ಗಂಗಾಂ ಶಂಕರೀಂ ಲೋಕಶಂಕರಂ । ಪಿತರಂ ಶ್ರೀನಿವಾಸಾಖ್ಯಂ ಸ್ಮಾರ್ತಕರ್ಮ ಸುಕೋವಿದಂ ॥ ರಾಮಕೃಷ್ಣೇನ ಸದ್ಬುಧ್ಯಾ ಕರ್ಣಾಟಾರ್ಥ ಸುಸಂಯುತಂ । ಶಿಷ್ಯಾನಾಂ ತನ್ಯತೇ ತುಷ್ಟ್ಯೈ ಕರ್ಮೋಪ ನಯನಂ ಶುಭಂ ॥

ಯಜಮಾನನಾದವನು ಉಪನಯನದ ಹಿಂದಿನ ದಿವಸ, ವಟು ಮತ್ತು ಪತ್ನೀ ಸಹಿತ ಮಂಗಳಸ್ನಾನವನ್ನು ಮಾಡಿ ಪುಣ್ಯಾಹ, ನಾಂದಿ, ಗ್ರಹಯಜ್ಞ, ಇಷ್ಟ ದೇವತಾ ಪೂಜೆ, ಮಂಟಪ ಪೂಜೆಗಳನ್ನೂ ವಟುವಿಗೆ ಜಾತಕರ್ಮಾದಿ ಸಂಸ್ಕಾರಗಳು ಆಗದೇ ಇದ್ದಲ್ಲಿ ಜಾತಕರ್ಮ, ನಾಮಕರಣ, ಅನ್ನಪ್ರಾಶನಾದಿ ಗಳನ್ನೂ ಮತ್ತು ಸಂಪ್ರದಾಯವನ್ನನುಸರಿಸಿ ದೇವತಾ ಸಮಾರಾಧನೆ, ಸುವಾ ಸಿನೀ ಪ್ರಾರ್ಥನೆ ಇತ್ಯಾದಿಗಳನ್ನು ನೆರವೇರಿಸಿಕೊಂಡು ಉಪನಯನದ ದಿನ ಪ್ರಾತಃಕಾಲ ಪತ್ನೀ ಪುತ್ರ ಸಹಿತ ಮಂಗಳಸ್ನಾನವನ್ನು ಆಚರಿಸಿ, ನಿತ್ಯ ಕರ್ಮಾನುಷ್ಠಾನದ ಅನಂತರ ಕರ್ಮಣಃ ಪುಣ್ಯಾಹವನ್ನೂ-ಕಂಕಣಧಾರಣೆ ಯನ್ನೂ ಮಾಡಿಕೊಂಡು (ವಿಧಿಪ್ರಕಾರ ಚೌಲ ಹೋಮಾನಂತರ) ಉಪನಯ ನಕ್ಕೆ ಸಂಕಲ್ಪವನ್ನು ಮಾಡಿಕೊಂಡು ಉಪನಯನದ ಅಧಿಕಾರ ಸಿದ್ಧಿ ಗೋಸ್ಕರ ಆಚಾರ್ಯನಾದ ತಾನೂ ಮತ್ತು ವಟುವೂ ಸಹ ಪ್ರಾಜಾಪತ್ಯ ಕೃಛ್ರತ್ರಯ ಗಳನ್ನು ಮಾಡಿ ವಟು ಪ್ರಾಯಶ್ಚಿತ್ತವನ್ನು ಮಾಡಬೇಕು.

ಏವಂ........ಪ್ರೀತ್ಯರ್ಥಂ ಇಮಂ ಮಮ ಕುಮಾರಂ ಉಪನೇಷ್ಯೇ ತದಂಗ ವಟು ಪ್ರಾಯಶ್ಚಿತ್ತಂ ಕರಿಷ್ಯೇ ॥

ಮೂಲ – ಅಶೇಷೇ ಹೇ ಪರಿಷತ್ ಮದೀಯಾಂ ವಿಜ್ಞಾಪನಾಂ ಸಮ್ಯಕ್ ಅವಧಾರ್ಯ ಮಯಾ ಸಮರ್ಪಿತಾಂ ಇಮಾಂ ಸೌವರ್ಣೀಂ ಪರಿಷತ್ ದಕ್ಷಿಣಾಂ ಯತ್ಕಿಂಚಿತ್ ದಕ್ಷಿಣಾಮಪಿ ಯಥೋಕ್ತ ದಕ್ಷಿಣಾಮಿವ ಸ್ವೀಕೃತ್ಯ ಮಮ ಜನ್ಮ ಪ್ರಭೃತಿ ಏತತ್ ಉಪನಯನ ಶುಭ ಲಗ್ನ ಪರ್ಯಂತಂ ಮಧ್ಯೇ ವರ್ತನಿಕಾಲೇ ಸವರ್ಣ ಅಸವರ್ಣ ಧಾತ್ರೀ ಜನಯಿತ್ರೀ ಪರಿಪಾಲನ ಪ್ರಮುಖ ಅನೇಕ ಸ್ತನ್ಯಪಾನ ಸಜಾತೀಯ ವಿಜಾತೀಯ ಸಹಚರ ಕ್ರೀಡಾ ಸಲ್ಲಾಪ ಸಹಭೋಜನ ಪರ್ಯುಷಿತ ಉಚ್ಛಿಷ್ಟಾನ್ನ ಭೋಜನ ಅನಿಯತ ಮೂತ್ರ ಪುರೀಷ ಉತ್ಸರ್ಜನ ತತ್ತತ್ಕಾಲ ಶೌಚಾಭಾವ ಮೌನಾಭಾವ ಪ್ರಭೃತೀನಾಂ ದೋಷಾಣಾಂ ಅಪನೋದನಾರ್ಥಂ ಪೂರ್ವಪೂರ್ವ ಕರ್ಮ ಅತಿಕ್ರಮ ಕರ್ಮಲೋಪ ಪ್ರಾಯಶ್ಚಿತ್ತಾರ್ಥಂ ಉತ್ತರತ್ರ ಉಪನಯನವ್ರತ ಅಧಿಕಾರಯೋಗ್ಯತಾ ಸಿದ್ಧ್ಯರ್ಥಂ ಪ್ರಾಜಾಪತ್ಯಾದಿ ಕೃಚ್ಛ್ರ ತ್ರಯ ರೂಪೇಣ ಪ್ರಾಯಶ್ಚಿತ್ತಂ ನಿಶ್ಚಿತ್ಯಮಾಂ ಅನುಗೃಹಾಣ ಯೋಗ್ಯತಾ ಸಿದ್ಧಿರಸ್ತು ॥ ಹಿರಣ್ಯಗರ್ಭ .... ಮೇ ॥ ಇದಂ ಯಥಾ ಶಕ್ತಿ ಹಿರಣ್ಯಂ ॥ ನಾನಾ ಗೋತ್ರೇಭ್ಯಃ ಬ್ರಾಹ್ಮಣೇಭ್ಯಃ ಸಂಪ್ರದದೇ ನಮಮ ॥

ತಾತ್ಪರ್ಯ –ವಟುವಾದವನು ಸಭೆಯನ್ನು ಕುರಿತು ಹೀಗೆ ಅರಿಕೆ ಮಾಡಿಕೊಳ್ಳಬೇಕು. ಎಲೈ ಸಭೆಯೆ, ನನ್ನ ವಿಜ್ಞಾಪನೆಯನ್ನು ಚೆನ್ನಾಗಿ ಗಮನಿಸಿ, ನನ್ನಿಂದ ಸಮರ್ಪಿಸಲ್ಪಡುವ ಯಥಾಶಕ್ತಿ ದಕ್ಷಿಣೆಯನ್ನು ಉಕ್ತ ದಕ್ಷಿಣೆಗೆ ಸಮಾನವೆಂದು ತಿಳಿದು ಅದನ್ನು ಸ್ವೀಕರಿಸಿ, ನನ್ನ ಜನನದ ಮೊದಲು ಈ ಉಪನಯನದ ಶುಭಲಗ್ನದವರೆವಿಗೂ ಇರುವ ಮಧ್ಯಭಾಗದ ದಿನಗಳಲ್ಲಿ ಸ್ವಜನ ಮತ್ತು ಇತರ ಪ್ರಮುಖರಾದವರಿಂದ ಪಾಲಿಸಲ್ಪಡುವಿಕೆಯೂ, ತಾಯಿಯೇ ಮೊದಲಾದವರ ಇತರರ ಸ್ತನ್ಯಪಾನದಿಂದಲೂ ಸ್ವಜನ ಮತ್ತು ಇತರರೊಡನೆ ಓಡಾಟವೂ, ಆಡುವಿಕೆಯೂ ಮತ್ತು ಮಾತನಾಡುವಿಕೆಯೂ ಅವರೊಡನೆ ಊಟಮಾಡುವಿಕೆಯೂ, ತಂಗಳನ್ನ ಎಂಜಲನ್ನಗಳನ್ನು ತಿನ್ನುವಿಕೆಯೂ ನಿಯಮರಹಿತವಾಗಿ ಮಲಮೂತ್ರ ವಿಸರ್ಜನೆಯೂ, ನಿಂತುಕೊಂಡು

ಮಲಮೂತ್ರಾದಿಗಳನ್ನು ವಿಸರ್ಜನೆ ಮಾಡುವುದೂ ಆಯಾ ಕಾಲಗಳಲ್ಲಿ ಅನು ಸರಿಸಬೇಕಾದ ಶುದ್ಧಿಯ ಅಭಾವವೂ, ಮೌನದ ಅಭಾವವೂ ಇವೇ ಮೊದ ಲಾದ ದೋಷಗಳನ್ನು ಹೋಗಲಾಡಿಸಿ ಹಿಂದೆ ಅನುಷ್ಠಾನ – ಮಾಡದೇ ಇರುವ ದೋಷಗಳ ಪ್ರಾಯಶ್ಚಿತ್ತಾರ್ಥವಾಗಿಯೂ ಮುಂದೆ ಉಪನಯನ ವ್ರತದ ಅನುಷ್ಠಾನ ಅಧಿಕಾರ ಸಿದ್ಧಿಗಾಗಿಯೂ ಪ್ರಾಜಾಪತ್ಯವೇ ಮೊದಲಾದ ಮೂರು ಕೃಛ್ರಗಳ ರೂಪದಿಂದ ಪ್ರಾಯಶ್ಚಿತ್ತವನ್ನು ನಿರ್ಣಯಿಸಿ ನನ್ನನ್ನು ಅನುಗ್ರ ಹಿಸಬೇಕೆಂದು ಸಭೆಯನ್ನು ಪ್ರಾರ್ಥಿಸಿ ಸಭೆಯ ಆಜ್ಞಾನುಸಾರ ಕೃಛ್ರತ್ರಯ ಗಳಿಗೆ ಬದಲಾಗಿ ಯಥಾಶಕ್ತಿ ಹಿರಣ್ಯದಾನವನ್ನು ವಟುವಿನಿಂದ ಮಾಡಿಸಿ ಆಚಾರ್ಯನಾದ ತಾನೂ ಸಹ ಮೂರು ಪ್ರಾಜಾಪತ್ಯ ಕೃಛ್ರಗಳನ್ನಾಗಲಿ ಅಥವಾ ತತ್ಪ್ರತಿನಿಧಿ ಯಥಾಶಕ್ತಿ ಹಿರಣ್ಯವನ್ನಾಗಲಿ – ದಾನಮಾಡಿ ತಾನು ಉಪನಯನವನ್ನು ಮಾಡಿಸಿಕೊಳ್ಳುವ ಅಧಿಕಾರವನ್ನು ಸಂಪಾದಿಸಿಕೊಂಡು ವಟುವಿಗೆ ಉಪನಯನವನ್ನು ಮಾಡುವ ಅಧಿಕಾರವನ್ನು ಸಂಪಾದಿಸಿಕೊಡ ಬೇಕು. ಇಲ್ಲಿಗೆ ವಟು ಪ್ರಾಯಶ್ಚಿತ್ತವು ಸಂಪೂರ್ಣವಾಯಿತು.

ಕರ್ಮಣಃ ಪುಣ್ಯಾಹಂ ವಾಚಯೇತ್ । ಸೋದಕಂ ಕಲಶಂ ತುಂಡುಲ-ತಾಂಬೂಲಯುಕ್ತ ಪಾತ್ರೇಣಾ ಪಿಧಾಯ ಓಷಧೀಷು ಪ್ರತಿಷ್ಠಾಪ್ಯ ವಿನಾಯಕ ವರುಣ ಪೂಜಾಂ ಕೃತ್ವಾ ಬ್ರಾಹ್ಮಣಾನ್ ಪ್ರಾರ್ಥಯೇತ್ ॥ ಓಂ ಕರ್ಮಣಃ ಪುಣ್ಯಾಹಂ ಭವಂತೋ ಬ್ರುವಂತು .... ಓಂ ಪುಣ್ಯಾಹಂ ಕರ್ಮಣೋಽಸ್ತು ॥ ಯತ್ಪುಣ್ಯಂ........ತೇ ॥ ಓಂ ಕರ್ಮಣೇ ॥ಸ್ವಸ್ತಿ ಭವಂತೋ ಬ್ರುವಂತು । ಓಗ್‌ಂ ಸ್ವಸ್ತಿ ಕರ್ಮಣೋಽಸ್ತು ಸ್ವಸ್ತಯೇ....ನಃ । ಓಂಕರ್ಮಣಋದ್ಧಿಂ ಭವಂತೋ । ಬ್ರುವಂತು ॥ ಓಂ ಕರ್ಮ ಋಧ್ಯತಾಂ । ಋಧ್ಯಾ ಸ್ಮ .... ರಾಃ ॥ ಶಾಂತಿರಸ್ತು .... ಧನ .... ಸ್ತು ॥ ಇತಿ ಕುಮಾರಾಂ ಜಲೌ ಕಲಶೋದಕಂ ನಿನೀಯ । ಪ್ರೋಕ್ಷ್ಯ ॥ ರಕ್ಷಾ ॥ ಏವಂ....ರ್ಥಂ.... ಉಪನಯನಾಂಗ ರಕ್ಷಧಾರಣಂ ಕರಿಷ್ಯೇ॥ ಆಚಮನ ಯೋಗ್ಯತಾ ಸಿದ್ಧ್ಯರ್ಥಂ ನವತಂತುಧಾರಣಂ ಕರಿಷ್ಯೇ ॥

ಅಥ ನವತಂತು ಮತ್ತು ಯಜ್ಞೋಪವೀತಧಾರಣ ವಿಧಿಃ ॥ ಸಂಕಲ್ಪ ಪುರಸ್ಸರವಾಗಿ ಆಚಮನ ಯೋಗ್ಯತಾ ಸಿದ್ಧಿಗೋಸ್ಕರ ನವತಂತುಧಾರಣೆ

ಮಾಡುತ್ತೇನೆಂದು ಸಂಕಲ್ಪಿಸಿ ಪೂಜಾದಿಗಳನ್ನು ಮಾಡಿ ಬ್ರಾಹ್ಮಣರ ಆಶೀರ್ವಾದ ಪಡೆದು ಆಚಾರ್ಯನಾದವನು ವಟುವಿಗೆ ಒಂಭತ್ತು ಎಳೆಯಿಂದ ಕೂಡಿದ ಉಪವೀತವನ್ನು ನಮೋ.... ಯುಃ। ಎಂಬ ಮಂತ್ರದಿಂದ ಹಾಕಬೇಕು. ಅನಂತರ ಆಚಮನ ಮಾಡಿಸಬೇಕು. ರಕ್ಷಾಸೂತ್ರ ಪೂಜಾಂ ಕೃತ್ವಾ ಬೃಹತ್ಸಾಮೇತಿ ಧಾರಯೇತ್ । ನವತಂತು ಪೂಜಾ ಧಾರಣ ॥ ರಕ್ಷಾಸೂತ್ರ ಧಾರಣ, ನವತಂತು ಧಾರಣ ಮುಹೂರ್ತಃ ಸು.... ತು.... ಸು.... ಸ್ತು ॥

ತಾತ್ಪರ್ಯ—ಶುಕ್ಲ ಪ್ರತಿಪದಾದಿಗಳಲ್ಲಿ ಸೂರ್ಯನಿಂದ ಬೆಳಗಲ್ಪಟ್ಟ ಚಂದ್ರನು ಮತ್ತೆ ಮತ್ತೆ (ಪುನಃ ಪುನಃ) ಹೊಸದಾಗಿ ಕಾಣಿಸುತ್ತಾ ಜನಗಳಿಗೆ ಆಹ್ಲಾದವನ್ನುಂಟುಮಾಡುತ್ತಾನೆ. ಮತ್ತು ಪ್ರತಿಪದಾದಿಗಳನ್ನು ಜ್ಞಾಪಿಸುವನಾಗಿರುತ್ತಾನೆ. ರಾತ್ರಿಗಳ ಮೊದಲ ಭಾಗದಲ್ಲಿ ಹುಟ್ಟುವುದರ ಮೂಲಕ ರಜನೀಕರನಾದ ಈ ಚಂದ್ರನು ಶುಕ್ಲಪಕ್ಷದಲ್ಲಿ ರಾತ್ರಿಯ ಮೊದಲ ಭಾಗದಲ್ಲಿ ಪಶ್ಚಿಮ ದಿಕ್ಕಿನಲ್ಲಿ ಕಾಣಿಸುತ್ತಲೂ, ಕೃಷ್ಣಪಕ್ಷದಲ್ಲಿ ರಾತ್ರಿಯ ಕೊನೆಯ ಭಾಗದಲ್ಲಿ ಪೂರ್ವದಲ್ಲಿ ಕಾಣಿಸುತ್ತಲೂ ಬರುವ ಈ ಚಂದ್ರನು ದೇವತೆಗಳಿಗೆ ಹವಿರ್ಭಾಗವನ್ನು ಕೊಡುತ್ತಾನೆ. (ಯಾಗಗಳು ದ್ವಿತೀಯಾದಿ ತಿಥಿಗಳ ನಿಯಮವನ್ನು ಅಪೇಕ್ಷಿಸುತ್ತವೆ. ತಿಥಿಗಳು ಸೂರ್ಯ ಚಂದ್ರರ ಸಾನ್ನಿಧ್ಯ ದೂರಗಳಿಂದ ಉಂಟಾಗುತ್ತವೆ. (ಅಮಾವಾಸ್ಯ ಸೂರ್ಯ ಚಂದ್ರರಿಗೆ ಅತ್ಯಂತ ಸಾಮೀಪ್ಯ, ಹುಣ್ಣಿಮೆ ಅತ್ಯಂತ ದೂರ) ಈ ರೀತಿ ಮಹಾ ಪ್ರಭಾವಶಾಲಿಯಾದ ಚಂದ್ರನು ಈ ವಟುವಿಗೆ ಧೀರ್ಘಾಯುಷ್ಯವನ್ನುಂಟುಮಾಡಲಿ, ಎಂದು ನವತಂತುವನ್ನು ವಟುವಿಗೆ ಧಾರಣೆಮಾಡಿ ಆಚಮನ ಮಾಡಿಸಬೇಕು. ಯಜ್ಞೋಪವೀತಂ ಸೌವರ್ಣಂ ಸರ್ವಾನುಷ್ಠಾನ ಸಾಧನಂ। ಉಪವೀತಂ ಪ್ರದಾಸ್ಯಾಮಿ ಪ್ರೀತೋಭವತು ಮಾಧವ ॥ ಇಮಾನಿ ಯಜ್ಞೋಪವೀತ ದಾನಾನಿ। ಮಮ ಕುಮಾರಸ್ಯ ದ್ವಿಜನ್ಮ ಯೋಗ್ಯತಾ ಸಿದ್ಧ್ಯರ್ಥಂ ಯಜ್ಞೋಪವೀತದಾನ ಧಾರಣಂ ಕರಿಷ್ಯೇ ॥ ಸದಕ್ಷಿಣವಾಗಿ ಯಜ್ಞೋಪವೀತ ದಾನ ಅನಂತರ ಧಾರಣೆ ಆಚಮನ ಮಾಡಿಸಬೇಕು.

ನನ್ನ ಮಗನಿಗೆ ಎರಡನೆಯ ಜನ್ಮದ ಪ್ರಾಪ್ತಿಗಾಗಿ ಯಜ್ಞೋಪವೀತ

ವನ್ನು ಧಾರಣೆ ಮಾಡಿಸುತ್ತೇನೆ. ಎಂದು ಸಂಕಲ್ಪಮಾಡಿ ಪೂಜಾ ನಂತರ ಬ್ರಾಹ್ಮಣರ ಆಶೀರ್ವಾದ ಪಡೆದು ಬ್ರಾಹ್ಮಣರಿಗೆ ಯಜ್ಞೋಪವೀತ, ಗೋಪೀ ಚಂದನವನ್ನು ದಕ್ಷಿಣೆ ಸಹಿತ ದಾನಮಾಡಿಸಿ ಅನಂತರ ಆಚಾರ್ಯನು ವಟುವಿಗೆ ಯಜ್ಞೋಪವೀತವನ್ನು, ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್। ಆಯುಷ್ಯಮಗ್ರಿಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ॥ ಈ ಮಂತ್ರದಿಂದ ಧಾರಣೆಮಾಡಿಸಿ ಅವನಿಂದ ಈ ಮಂತ್ರವನ್ನು ಹೇಳಿಸಿ ಆಚಮನವನ್ನು ಮಾಡಿಸಬೇಕು.

ತಾತ್ಪರ್ಯ— ಯಜ್ಞಾದಿಗಳಿಗೆ ಸಾಧನವಾದ ಉಪವೀತವು ಅತ್ಯಂತ ಶ್ರೇಷ್ಠವು. ಪೂರ್ವದಲ್ಲಿ ಬ್ರಹ್ಮನ ಜೊತೆಯಲ್ಲಿ ಹುಟ್ಟಿದ್ದು. ಆಯುಃ ಪ್ರದವೂ ಮೊದಲನೆಯದೂ, ಪ್ರತಿಕೂಲಗಳನ್ನು ಹೋಗಲಾಡಿಸುವುದೂ ಶುದ್ಧವೂ ಆದ ಯಜ್ಞೋಪವೀತಧಾರಣೆಯಿಂದ ದೇಹ ಶಕ್ತಿಯೂ, ತೇಜಸ್ಸೂ ಉಂಟಾಗಲಿ. ಸುಮುಹೂರ್ತೋಽಸ್ತ್ವಿತ್ಯನುಗೃಹ್ಣಂತು॥ ಯಜ್ಞೋಪವೀತ ಧಾರಣ ಮುಹೂರ್ತಸ್ಸುಮುಹೂರ್ತೋಽಸ್ತು. ಅನಂತರಮಾತಾ ಸಹಭೋಜನವನ್ನು ವಟುವಿಗೆ ಮಾಡಿಸಬೇಕು. ಭೋಜನಕ್ಕೆ ಮೊದಲು ಆಚಾರ್ಯನು ಗಾಯತ್ರೀ ಮಂತ್ರವನ್ನು ಪಠಿಸುತ್ತಾ ಕುಮಾರನ ಕೈಯಲ್ಲಿ ನೀರು ಹಾಕಿ ಅನ್ನಕ್ಕೆ ಪ್ರೋಕ್ಷಣೆ ಮಾಡಿಸಿ ಸುತ್ತಲೂ ಪರಿಷೇಚನ ಮಾಡಿಸಿ ಆಪೋಶನವನ್ನು ಹಾಕಿ, ಅಮೃತೋಪಸ್ತರಣಮಸಿ, ಎಲೈ ಅಮೃತವೇ ನೀನು ಆಹಾರದ ತಳ ಭಾಗದಲ್ಲಿ ಹಾಸಲ್ಪಟ್ಟಿದ್ದೀಯೆ, ಎಂದು ನೀರನ್ನು ಕುಡಿಸಿ ಪ್ರಾಣಾಹುತಿ ಮಂತ್ರಗಳನ್ನು ಆಚಾರ್ಯನು ಹೇಳುತ್ತಿರುವಾಗ ಕುಮಾರನು ಮೌನವಾಗಿ ಪ್ರಾಣಾಹುತಿಗಳನ್ನು ತೆಗೆದುಕೊಳ್ಳಬೇಕು. ಸಂಪ್ರದಾಯಾನುಸಾರವಾಗಿ ತಾಯಿಯು ಕುಮಾರನಿಗೆ ತುಪ್ಪದ ಆಪೋಶನವನ್ನು ಹಾಕುತ್ತಾಳೆ. ಸುವಾಸಿನಿಯರು ಆರತಿಯನ್ನು ಮಾಡುತ್ತಾರೆ. ಇದಾದ ನಂತರ ಭೋಜನಾ

ನಂತರದಲ್ಲಿ ಆಚಾರ್ಯನು ಎರಡು ಉದ್ಧರಣೆ ನೀರನ್ನು ಕುಮಾರನ ಕೈಯಲ್ಲಿ ಉತ್ತರಾಪೋಶನ ಹಾಕಿ, ಅಮೃತಾಽಪಿಧಾನಮಸಿ ॥ ಎಂದು ಹೇಳಬೇಕು.

ತಾತ್ಪರ್ಯ--ಎಲೈ ಅಮೃತವೇ, ನೀನು ಅಹಾರಕ್ಕೆ ಮುಚ್ಚಳವಾಗಿದ್ದೀಯೆ ಎಂದು ಹೇಳಿದಮೇಲೆ ಕುಮಾರನು ಉತ್ತರಾಪೋಶನವನ್ನು ತೆಗೆದುಕೊಂಡು ಕೈಕಾಲು ತೊಳೆದು ಎರಡು ಸಲ ಶುದ್ಧಾಚಮನವನ್ನು ಮಾಡಬೇಕು. ಅನಂತರ ಉಪನಯನಾಂಗ ದಿಗ್ವಪನವನ್ನು ಮಾಡಬೇಕು. ಭೋಜನಾಂತೆ ದ್ವಿರಾಚಮ್ಯ । ಉಷ್ಣೇನ ವಾಯ ಉದಕೇನೇ ತ್ಯಾದ್ಯಾ ಕೇಶನಿಧಾನಾಂತಂ ಸರ್ವಂ ಚೌಲವತ್ಕುರ್ಯಾತ್ ॥

ಮಂತ್ರ--ಉಷ್ಣೇನ ವಾಯವುದಕೇ ನೇತ್ಯದಿತಿಃ ಕೇಶಾನ್ ವಪತು ॥೧॥

ಯಜುಷಾ ಉಷ್ಣಾಃ ಶೀತಾಸ್ವಪ ಆನೀಯ ॥

ತಾತ್ಪರ್ಯ--ಎಲೈ ವಾಯುದೇವತೆಯೇ, ಅದಿತಿಯ ಅನುಗ್ರಹದಿಂದ ಈ ಕುಮಾರನಿಗೆ ವಪನವನ್ನು ಮಾಡುವುದಕ್ಕೆ ನೀನು ಬಿಸಿನೀರಿನ ರೂಪದಿಂದ ಬಂದು ಈ ಕುಮಾರನನ್ನು ಅನುಗ್ರಹಿಸು. ಈ ಮಂತ್ರದಿಂದ ಬಿಸಿನೀರನ್ನು ತಣ್ಣೀರಿನಲ್ಲಿ ಬೆರಸಬೇಕು.

ಮಂತ್ರ—ಆಪ ಉಂದಂತು ಜೀವಸೇ ದೀರ್ಘಾಯುತ್ವಾಯುವರ್ಚಸೇ ಜ್ಯೋಕ್ಚ ಸೂರ್ಯಂ ದೃಶೇ ॥ ೨ ॥ ಕುಮಾರಸ್ಯ ಸ್ವಶಿರಃ ಆರ್ದ್ರಕಂ ಕೃತ್ವಾ । ತತಸ್ತ್ರೀನ್ ತ್ರೀನ್ ದರ್ಭಾನ್ಗೃಹೀತ್ವಾ॥ ಪುರಸ್ತಾದಂತರ್ಧಾಯ ॥

ತಾತ್ಪರ್ಯ—ಈ ಮಾಣವಕನು ದೀರ್ಘಕಾಲ ಬದುಕುವಂತೆಯೂ, ಬದುಕಿರುವಷ್ಟು ದಿನಗಳೂ ದೃಷ್ಟಿಪಾಟವವು ಚೆನ್ನಾಗಿರುವಂತೆಯೂ ವರ್ಚಸ್ವಿಯಾಗಿರುವಂತೆಯೂ ಅಬ್ದೇವತೆ ಮಾಣವಕನ ಶಿರಸ್ಸನ್ನು ನೆನೆಸಲಿ.

ಈ ಮಂತ್ರದಿಂದ ಬೇರುಸಹಿತವಾದ ಮೂರು ದರ್ಭೆಯ ಗುಮ್ಮಿಗಳೂ ಮೂರು ಹಂದಿಯ ಮುಳ್ಳುಗಳೂ ಅತ್ತಿಯ ಕೊನೆಯನ್ನೂ ಸಹ ಸೇರಿಸಿ ಅವುಗಳಿಂದ ಕುಮಾರನ ಶಿರಸ್ಸನ್ನು ನೆನಸಬೇಕು. ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಹುಡುಗನ ಶಿರಸ್ಸಿನ ಹತ್ತಿರ ಮೂರು ಮೂರು ದರ್ಭೆಗಳನ್ನು ಉದಗಗ್ರ ಮತ್ತು ಪ್ರಾಗಗ್ರಗಳಾಗಿ ಹಿಡಿದುಕೊಂಡು ಆಚಾರ್ಯನು ಆ ದರ್ಭೆಗಳನ್ನು ಕೂದಲುಗಳ ಸಹಿತ ಕತ್ತರಿಸಬೇಕು. ಮೊದಲು ಶಿರಸ್ಸಿನ ಪೂರ್ವ ಭಾಗದಲ್ಲಿ ವಪನವನ್ನು ಮಾಡಬೇಕು.

ಮಂತ್ರ – ಯೇನಾವಪತ್ಸವಿತಾಕ್ಷುರೇಣ ಸೋಮಸ್ಯ ರಾಜ್ಞೋ ವರುಣಸ್ಯ ವಿದ್ವಾನ್ । ತೇನ ಬ್ರಹ್ಮಾಣೋ ವಪತೇದಮಸ್ಯಾಯುಷ್ಮಾನ್ ಜರದಷ್ಟಿರ್ಯಥಾ ಸದಯಂ ॥ ನಾರಾಯಣ ಶರ್ಮಾ । ಪುರಸ್ತಾಚ್ಛಿರಃ ಪ್ರವಪೇತ್ । ಅಪಉಪಸ್ಪೃಶ್ಯ ।

ತಾತ್ಪರ್ಯ – ವಪನ ಕರ್ಮ ಮಾಡುವುದರಲ್ಲಿ ಕುಶಲನಾದ ಸವಿತೃವು ಸೋಮರಾಜನ ಮತ್ತು ವರುಣನ ಶಿರಸ್ಸನ್ನು ಯಾವ ಕತ್ತಿಯಿಂದ ವಪನ ಮಾಡಿದನೋ ಅದಕ್ಕೆ ಸಮಾನವಾದ ಕತ್ತಿಯಿಂದ ಈ ಮಾಣವಕನ ಶಿರಸ್ಸನ್ನು ವಪನಮಾಡುವುದಕ್ಕೆ ಪುಣ್ಯಾಹವಾಚನ ಕರ್ತೃಗಳಾದ ಎಲೈ ಬ್ರಾಹ್ಮಣರೇ, ನೀವು ನನಗೆ ಅನುಜ್ಞೆಯನ್ನು ಕೊಡಿ. ಈ ರೀತಿ ವಪನ ಮಾಡಿದ್ದೇ ಆದರೆ ಈ ಮಾಣವಕನು ದೀರ್ಘಾಯುಷ್ಮಂತನೂ ಮತ್ತು ತಿಂದದ್ದನ್ನು ಅರಗಿಸಿಕೊಳ್ಳುವ ಶಕ್ತಿಯುಳ್ಳವನೂ ಆಗುತ್ತಾನೆ. ಈ ರೀತಿ ಪೂರ್ವದಿಗ್ವಪನವನ್ನು ಮಾಡಿ ಕೈ ತೊಳೆದುಕೊಳ್ಳಬೇಕು. ಕುಮಾರನ ದಕ್ಷಿಣ ಭಾಗದಲ್ಲಿ ತಾಯಿಯಾಗಲೀ ಅಥವಾ ಬ್ರಹ್ಮಚಾರಿಯಾಗಲೀ ಕುಮಾರನನ್ನು ನೋಡುತ್ತಾ ಮುಂದಿನ ಮಂತ್ರವನ್ನು ಹೇಳಬೇಕು. ದಕ್ಷಿಣತೋ ಮಾತಾ ಬ್ರಹ್ಮಚಾರೀವಾ ॥

ಮಂತ್ರ—ಯತ್ಕ್ಷುರೇಣ ಮರ್ಚಯತಾ ಸುಪೇಶಸಾ ವಪ್ತಾವಪಸಿ ಕೇಶಾನ್ । ಶುಂಧಿ ಶಿರೋಮಾಽಸ್ಯಾಯುಃ ಪ್ರಮೋಷೀಃ ॥ ೧ ॥ ಇತಿ ಪ್ರಥಮ ವಪನೇ ವಪಂತಂ ಮಾತಾನುಮಂತ್ರಯತೇ ಆನಡುಹೇ ಸಯವೇ ಶಕೃತ್ಪಿಂಡೇಕೇಶಾನುಪಯಮ್ಯ ॥

ತಾತ್ಪರ್ಯ—ತೀಕ್ಷ್ಣವಾದ ಉಜ್ವಲವಾದ ರೂಪದಿಂದ ಕೂಡಿದ ಕತ್ತಿಯಿಂದ ಮಾಣವಕನ ಕೂದಲನ್ನು ಯಾವಾಗ ವಪನಮಾಡುತ್ತೀಯೋ ಆಗ ಮಾಣವಕನ ಶಿರಸ್ಸಿನಲ್ಲಿ ಕೂದಲಿಲ್ಲದೇ ಶುದ್ಧಿ ಮಾಡು. ಮಾಣವಕನ ಆಯುಸ್ಸನ್ನು ಕಳೆಯಬೇಡ. ಈ ಮಂತ್ರದಿಂದ ಮೊದಲನೆಯದಾದ ಶಿರಸ್ಸಿನ ಪೂರ್ವ ದಿಗ್ವಪನದಲ್ಲಿ ತಾಯಿಯಾಗಲೀ ಬ್ರಹ್ಮಚಾರಿಯಾಗಲೀ ಅಭಿಮಂತ್ರಿಸಬೇಕು. ಕತ್ತರಿಸಿದ ಶಿರಸ್ಸಿನ ಪೂರ್ವದಿಕ್ಕಿನ ಕೂದಲುಗಳನ್ನು ಎತ್ತಿನ (ಹಸುವಿನ) ಸಗಣಿಯ ಉಂಡೆಯ ಮೇಲೆ ಯವಧಾನ್ಯದ ಸಹಿತ (ಅಥವಾ ಅಕ್ಷತೆಯ ಸಹಿತ) ತಾಯಿ ಇಟ್ಟು ಕೈ ತೊಳೆದುಕೊಳ್ಳಬೇಕು. ಮತ್ತು ಹೀಗೆಯೇ ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಗ್ವಪನಗಲ್ಲಿಯೂ ಸಹ ಯವಧಾನ್ಯದ ಸಹಿತ (ಹಸುವಿನ) ಸಗಣಿಯ ಉಂಡೆಯಲ್ಲಿ ಕೇಶಗಳನ್ನು ತಾಯಿ ಇಟ್ಟು ಕೈ ತೊಳೆದುಕೊಳ್ಳಬೇಕು. (ಕತ್ತರಿಸಿದ ದರ್ಭೆ ಮತ್ತು ಕೂದಲನ್ನು ತಂದೆಯಾದವನು (ಕುಮಾರನಿಂದ) ತಾಯಿಯ ಕೈಗೆ ಕೊಡಿಸಬೇಕು. ತಾಯಿಯಾದವಳು ಎತ್ತಿನ ಸಗಣಿಯ ಉಂಡೆಯ ಮೇಲೆ ಇರಿಸಬೇಕೆಂದು ಆಶ್ವಲಾಯನ ಪ್ರಯೋಗಕಾರರು ಹೇಳಿರುವುದರಿಂದ ಅದೇ ಸಂಪ್ರದಾಯವು ಯಜುರ್ವೇದದಲ್ಲಿಯೂ ನಡೆದುಕೊಂಡು ಬರುತ್ತಿದೆ). ಅನಂತರ ದಕ್ಷಿಣ ದಿಕ್ಕಿನ ಶಿರಸ್ಸನ್ನು ವಪನಮಾಡುವುದಕ್ಕೆ ಮೂರು ದರ್ಭೆಗಳನ್ನು ಪೂರ್ವಾಗ್ರವಾಗಿ ಹಿಡಿದುಕೊಂಡು ಕೂದಲು ಸಹಿತ ಕತ್ತರಿಸಬೇಕು. ತತ ಸ್ತ್ರೀನ್ ದರ್ಭಾನ್ ದಕ್ಷಿಣತೋಽಂತರ್ಧಾಯ ।

ಮಂತ್ರ– ಯೇನಪೂಷಾ ಬೃಹಸ್ಪತೇ ರಗ್ನೇರಿಂದ್ರಸ್ಯ ಚಾಯುಷೇವ

ಪತ್ । ತೇನಾ ಸ್ಯಾಯುಷೇ ವಪ ಸೌಶ್ಲೋಕ್ಯಾಯ ಸ್ವಸ್ತಯೇ ॥ ೪ ॥

ದಕ್ಷಿಣತಃ ಕೇಶಾನ್ವಾಪಯಿತ್ವಾ ಅಪವುಪಸ್ಪೃಶ್ಯತಾನ್ ಕೇಶಾನ್ ಶಕೃ ತ್ಪಿಂಡೇನಿಧಾಯ ।

ತಾತ್ಪರ್ಯ — ಪೂಷನಾಮಕ ದೇವತೆಯು ಯಾವ ಕತ್ತಿಯಿಂದ ಬೃಹಸ್ಪತಿ, ಅಗ್ನಿ, ಇಂದ್ರರ ಆಯುಸ್ಸು ಅಭಿವೃದ್ಧಿಯಾಗುವಂತೆ ವಪನಮಾಡಿ ದನೋ ಅದಕ್ಕೆ ಸದೃಶವಾದ ಕತ್ತಿಯಿಂದ ಎಲೈ ನನ್ನ ಶರೀರದ ಅಂತರಾ ತ್ಮನೇ ವಪನಮಾಡು. ಹಾಗೆ ಮಾಡುವ ವಪನದಿಂದ ನಾಶರಹಿತನೂ ಕೀರ್ತಿವಂತನೂ ಆಗುತ್ತೇನೆ. ಹೀಗೆ ಕತ್ತರಿಸಿದ ಕೂದಲನ್ನು ತಾಯಿಯಾದ ವಳು ಸಗಣಿಯ ಉಂಡೆಯ ಮೇಲಿರಿಸಬೇಕು. ಅನಂತರ ಪಶ್ಚಿಮ ದಿಗ್ವಪನ. ತತ ಸ್ತ್ರೀನ್ ದರ್ಭಾನ್ ಪಶ್ಚಿಮತೋಂತರ್ಧಾಯ ॥

ಮಂತ್ರ — ಯೇನಭೂಯಶ್ಚರಾತ್ರ್ಯಯಂ ಜ್ಯೋಕ್ಚಪಶ್ಯಾತಿ ಸೂರ್ಯಂ।

ತೇನಾಸ್ಯಾಯುಷೇ ವಪ ಸೌಶ್ಲೋಕ್ಯಾಯ ಸ್ವಸ್ತಯೇ ॥ ೫ ॥ ಪಶ್ಚಿಮತಃ

ಕೇಶಾನ್ವಾಪಯಿತ್ವಾ ಅಪಉಪಸ್ಪೃಶ್ಯತಾನ್ ಕೇಶಾನ್ ಶಕೃತ್ಪಿಂಡೇ ನಿಧಾಯ ॥

ತಾತ್ಪರ್ಯ — ಎಲೈ ನನ್ನ ಶರೀರದ ಅಂತರಾತ್ಮನೇ. ಈ ಮಾಣ ವಕನಿಗೆ ಪುನಃ ವಪನಮಾಡುವುದರಿಂದ ದೀರ್ಘಕಾಲ ಹೆಚ್ಚಾಗಿ ಸಂಚರಿಸುವಂ ತೆಯೂ, ಚಿರಕಾಲ ಸೂರ್ಯನನ್ನು ನೋಡುವಂತೆಯೂ, ನಾಶರಹಿತನಾಗುವಂ ತೆಯೂ ಆಗುವ ಹಾಗೆ ಮಾಡು. ಕತ್ತರಿಸಿದ ಕೂದಲನ್ನು ಮೊದಲಿನ ಹಾಗೆಯೇ ಇರಿಸುವುದು. ಅನಂತರ ಉತ್ತರ ದಿಗ್ವಪನ.

ತತಸ್ತ್ರೀನ್ ದರ್ಭಾನುತ್ತರತೋಂತರ್ಧಾಯ ॥

ಮಂತ್ರ — ಯೇನ ಪೂಷಾ ಬೃಹಸ್ಪತೇರಗ್ನೇರಿಂದ್ರಸ್ಯ ಚಾಯುಷೇ

ವಪತ್। ತೇನ ತೇ ವಪಾಮಿ ನಾರಾಯಣಶರ್ಮನ್ನಾಯುಷಾ ವರ್ಚಸಾ

ಯಥಾ ಜ್ಯೋಕ್ ಸುಮನಾ ಅಸಾಃ ॥ ೬ ॥ ಉತ್ತರತಃ ಕೇಶಾನ್ ವಾಪ

ಯಿತ್ವಾ ತಾನ್ ಕೇಶಾನ್ ಶಕೃತ್ಪಿಂಡೇ ನಿಧಾಯ ಅಪ ಉಪಸ್ಪೃಶ್ಯ ॥

ತಾತ್ಪರ್ಯ — ಪೂಷನಾಮಕ ದೇವತೆಯು ಯಾವ ಕತ್ತರಿಯಿಂದ ಬೃಹ ಸ್ಪತಿ, ಅಗ್ನಿ, ಇಂದ್ರ ಇವರ ಆಯುಸ್ಸು ಅಭಿವೃದ್ಧಿಯಾಗುವಂತೆ ವಪನ ಮಾಡಿದನೋ ಅದಕ್ಕೆ ಸಮಾನವಾದ ಕತ್ತರಿಯಿಂದ ಎಲೈ ಮಾಣವಕನೇ, ನೀನು ಆಯುಸ್ಸಿನಿಂದಲೂ, ವರ್ಚಸ್ಸಿನಿಂದಲೂ ಕೂಡಿದವನಾಗಿ ದೀರ್ಘಕಾಲ ಸಂತೋಷದಿಂದ ಕೂಡಿದ ಮನಸ್ಸುಂಟಾಗುವಂತೆ ವಪನ ಮಾಡುತ್ತೇನೆ- ಎಂದು ಹೇಳಿ ಕತ್ತರಿಸಿದ ಕೂದಲನ್ನು ಮೊದಲಿನ ಹಾಗೆಯೇ ಇರಿಸಿ ಕೈ ತೊಳೆದುಕೊಳ್ಳುವುದು.

ಮಂತ್ರ—ಉಪ್ತ್ವಾಯ ಕೇಶಾನ್ ವರುಣಸ್ಯ ರಾಜ್ಞೋ ಬೃಹಸ್ಪತಿಃ

ಸವಿತಾ ಸೋಮೋ ಅಗ್ನಿಃ। ತೇಭ್ಯೋ ನಿಧಾನಂ ಬಹುಧಾನ್ವ ವಿಂದನ್ನಂತರಾ

ದ್ಯಾವಾ ಪೃಥಿವೀ ಅಪಸ್ಸುವಃ ॥ ೮ ॥ ಇತಿ ಕೇಶಸಹಿತ ಮನಡುಹ ಶಕೃ

ತ್ಪಿಂಡಂ ಔದುಂಬರ ಮೂಲೇ ದರ್ಭಸ್ತಂಬೇ ವೋಪಗೂಹತಿ। ಕುಮಾರಂ ಸಮ್ಯಕ್ ಸ್ನಾಪಯಿತ್ವಾ—ಆಚಮ್ಯ.

ತಾತ್ಪರ್ಯ — ಬೃಹಸ್ಪತಿಯೂ, ಸವಿತೃವೂ, ಸೋಮನೂ, ಅಗ್ನಿಯೂ ಸಹ ವರುಣರಾಜನ ಕೇಶಗಳನ್ನು ವಪನಮಾಡಿ ಆ ಕೇಶಗಳನ್ನು ಇಡುವುದಕ್ಕೆ

ಒಂದಾದವೇಲೊಂದರಂತೆ ಯೋಚಿಸಿ ಕೊನೆಗೆ ಭೂಮ್ಯಂತರಿಕ್ಷಗಳ ಮಧ್ಯ ದಲ್ಲಿಯೂ, ಅಂತರಿಕ್ಷವಲ್ಲಿಯೂ, ಸ್ವರ್ಗಲೋಕವಲ್ಲಿಯೂ (ಕಾಲಭೇದಗಳನ್ನನು ಸರಿಸಿ, ಸ್ಥಾನಭೇದಗಳನ್ನು) ಅನುಕೂಲವೆಂದು ತಿಳಿವರು. ಈ ಮಂತ್ರದಿಂದ ಕೇಶ ಸಹಿತವಾದ ಸಗಣಿಯ ಉಂಡೆಯನ್ನು ಅತ್ತೀಮರದ ಬುಡದಲ್ಲಾಗಲೀ ದರ್ಭೆಯ ಗುಂಪಿನ ಬುಡವಲ್ಲಾಗಲೀ ಮುಚ್ಚಿಡಬೇಕು.

ಅನಂತರ ಕುಮಾರನಿಗೆ ಸ್ನಾನ ಮಾಡಿಸಿ ಎರಡು ಸಲ ಆಚಮನ ಮಾಡಿಸಬೇಕು. ಕುಮಾರನಿಗೆ ವಪನಮಾಡಿದ ಕತ್ತಿಯನ್ನು ತೊಳೆದು ಮೂರು ದಿನ ಆ ಕತ್ತಿಯಿಂದ ಮತ್ತೆ ಯಾರಿಗೂ ವಪನಮಾಡದಂತೆ ಇರಿಸ ಬೇಕು. ವಪನ ಮಾಡುವಾಗ ಕುಲಧರ್ಮವನ್ನನುಸರಿಸಿ ತನ್ನ ಗೋತ್ರದ ಋಷಿಗಳ ಸಂಖ್ಯೆಗಳಿಗನುಸಾರವಾಗಿ (ತ್ರ್ಯಾರ್ಷೇಯ ಇತ್ಯಾದಿ) ಕುಮಾರ ನಿಗೆ (೧, ೨, ೩, ೪, ೭) ಶಿಖೆಗಳನ್ನು ಬಿಡಿಸತಕ್ಕದ್ದು. ಸ್ನಾನಕ್ಕೆ ಪೂರ್ವ ತಲೆಗೆ ಸ್ವಲ್ಪ ಎಣ್ಣೆ ಹಚ್ಚಿಕೊಳ್ಳಲು ಹೇಳಿ ಆರತಿ ಮಾಡಿ, ಅನಂತರ ಸ್ನಾನ ಮಾಡಿಸುವ ಸಂಪ್ರದಾಯವಿದೆ.

ಅನಂತರ ಅಗ್ನಿ ಪ್ರತಿಷ್ಠೆ. ಪಾತ್ರ ಪ್ರಯೋಗಾಂತ ಮಾಡಿಕೊಂಡು ದೇವಪಾತ್ರೆಗಳ ಜೊತೆಗೆ ಮಾನುಷಪಾತ್ರೆಗಳನ್ನು ಒಟ್ಟಿಗೆ ಇರಿಸಬೇಕು. ಅವು ಯಾವುವೆಂದರೆ ಮುತ್ತುಗದ ಸಮಿತ್ತು, ದರ್ಭೆ, ನೀರು ಕೂರ್ಚೆ, ವಸ್ತ್ರ, ಕಲ್ಲು, ಮುತ್ತುಗದ ದಂಡ, ಕೃಷ್ಣಾಜಿನದ ಚೂರು, ಮೌಂಜೀ ಇವುಗಳನ್ನು ದೇವಪಾತ್ರೆಗಳ ಜೊತೆಗೆ ಒಟ್ಟಿಗೆ ಇಟ್ಟು ಪವಿತ್ರಕರಣಾದಿ ಆಜ್ಯಭಾಗಾಂತದ ವರೆವಿಗೂ ಅಗ್ನಿಮುಖವನ್ನು ಮಾಡಬೇಕು. ಅನಂತರ ಕುಮಾರನು ಪಾಲಾಶ ಸಮಿತ್ತನ್ನು ಹೋಮ ಮಾಡಬೇಕು. ಮಮ ಕುಮಾರಸ್ಯ ದ್ವಿಜನ್ಮ ಯೋಗ್ಯತಾ ಸಿದ್ಧ್ಯರ್ಥಂ ಉಪನಯನ ಹೋಮಾಖ್ಯಂ ಕರ್ಮ ಕರಿಷ್ಯೇ॥ (ಅಗ್ನೀಂಧನಾದಿ ಆಜ್ಯಭಾಗಾಂತೇ).

ಮಂತ್ರ — ಆಯುರ್ದಾದೇವಜರಸಂ ಗೃಣಾನೋ ಘೃತ ಪ್ರತೀಕೋ

ಘೃತಪೃಷ್ಠೋ ಅಗ್ನೇ। ಘೃತಂ ಪಿಬನ್ನಮೃತಂ ಚಾರುಗವ್ಯಂ ಪಿತೇವ ಪುತ್ರಂ ಜರಸೇನಯೇಮಂ॥ ಆಧೇಹಿ, ಇತಿ ಪಾಲಾಶೀಗ್ಂ ಸಮಿಧಮಾಧಾಪ್ಯ।

ತಾತ್ಪರ್ಯ--ದೀಪ್ತ ಅವಯವನಾಗಿಯೂ, ಪೃಷ್ಠಭಾಗದಲ್ಲಿ ಆಜ್ಯ ದಿಂದ ಕೂಡಿದವನಾಗಿಯೂ ಇರುವ ಎಲೈ ಅಗ್ನಿಯೇ, ನಾನು ಮಾಡತಕ್ಕ ಮಂತ್ರರೂಪವಾದ ಸ್ತೋತ್ರಗಳನ್ನು ತೆಗೆದುಕೊಂಡು ನೀನು ನನಗೆ ಆಯು ಸ್ಸನ್ನು ಕೊಡುವನಾಗು. ಈ ಕರ್ಮದ ಆಜ್ಯಭಾಗದಲ್ಲಿ ಕೊಡುವ ಅಮೃ ತಕ್ಕೆ ಸದೃಶವಾದ ಮನೋಹರವಾದ ಹಸುವಿನ ತುಪ್ಪವನ್ನು ತೆಗೆದುಕೊಂಡು ಪ್ರಕೃತ ನಾನು ಕೊಡುವ ಈ ಸಮಿಧಾಹುತಿಯಿಂದ ವಟುವನ್ನು ತಂದೆಯಾ ಗಿರತಕ್ಕವನು ಮಗನನ್ನು ಸರ್ವಪ್ರಕಾರದಿಂದಲೂ ದೀರ್ಘಾಯುಷ್ಮಂತನನ್ನಾಗಿ ಮಾಡುವಂತೆ ನೀನೂ ಸಹ ಮಾಡು. ಅನಂತರ ಅಗ್ನಿಗೆ ಉತ್ತರದಲ್ಲಿ ಕಲ್ಲನ್ನು ಇಟ್ಟು ಅದರ ಮೇಲೆ ವಟುವಿನ ಬಲಗಾಲನ್ನು ಇಡಿಸಿ ನಿಲ್ಲಿಸಬೇಕು. ಉತ್ತರೇಣಾಗ್ನಿಂ ದಕ್ಷಿಣೇನಪದಾ ಆತಿಷ್ಠೇತ್ಯಶ್ಮಾನಮಾಸ್ಥಾಪ್ಯ॥

ಮಂತ್ರ--ಆತಿಷ್ಠೇ ಮಮಶ್ಮಾನಮಶ್ಮೇವತ್ವಗ್ಂ ಸ್ಥಿರೋಭವ। ಅಭಿ ತಿಷ್ಠ ಪೃತನ್ಯತ ಸ್ಸಹಸ್ವ ಪೃತನಾಯತಃ॥

ತಾತ್ಪರ್ಯ—ಎಲೈ ವಟುವೇ, ಈ ಕಲ್ಲಿನ ಮೇಲೆ ನಿಂತುಕೋ. ಕಲ್ಲಿನ ಮೇಲೆ ನಿಂತಿರುವ ನೀನು ಕಲ್ಲಿನಂತೆ ಸ್ಥಿರವಾಗಿರು. ಯುದ್ಧ ಮಾಡಲು ಇಚ್ಛಿಸುವವರನ್ನು ಓಡಿಸು ಮತ್ತು ಯುದ್ಧಮಾಡಲು ಇಚ್ಛಿಸುವವರನ್ನು ತಡೆ. ಕಲ್ಲಿನಮೇಲೆ ನಿಂತಿರುವಾಗಲೇ ಕುಮಾರನಿಗೆ ವಸ್ತ್ರಧಾರಣೆ ಅಜಿನ ದಂಡ ಮತ್ತು ಮೌಂಜಿಧಾರಣೆಯನ್ನು ಮಾಡಬೇಕು. ಆಗ ತಾನೇ ಕತ್ತರಿಸಿ ಅನುಕೂಲಪಡಿಸಿದ ವಸ್ತ್ರವನ್ನು ಮುಂದೆ ಹೇಳುವ ಎರಡು ಮಂತ್ರಗಳಿಂದ ಅಭಿಮಂತ್ರಿಸಬೇಕು. ರೇವತೀಸ್ತ್ವೇತಿದ್ವಾಭ್ಯಾಂ ವಾಸೋಭಿಮಂತ್ರ್ಯ॥

ಮಂತ್ರ—ರೇವತೀಸ್ತ್ವಾ ವ್ಯಕ್ಷ್ಣನ್ ಕೃತ್ತಿಕಾಶ್ಚಾಕೃಂತಗ್ ಂಸ್ತ್ವಾ।

ಧಿಯೋವಯನ್ನವ ಗ್ನಾ ಅವೃಂಜನ್ತ್ಸಹಸ್ರಮಂತಾಗ್ಂ ಅಭಿತೋ ಅಯಚ್ಛ॥

ತಾತ್ಪರ್ಯ – ಎಲೈ ವಸ್ತ್ರವೇ, ರೇವತಿಯೆಂಬ ದೇವತೆಗಳು ನಿನ್ನ ನಿರ್ಮಾಣಕ್ಕೋಸ್ಕರ ಹತ್ತಿಯನ್ನೂ ಬೀಜಗಳನ್ನೂ ಬೇರೆ ಮಾಡಿ ಹಸನು ಮಾಡಿದರು. ಕೃತ್ತಿಕಾದಿ ದೇವತೆಗಳು ದಾರಗಳನ್ನು ತೆಗೆದರು. ಧಿಯ ಎಂಬ ದೇವತೆಗಳು ದಾರಗಳನ್ನು ಸೇರಿಸುವುದರ ಮೂಲಕ ವಸ್ತ್ರವನ್ನು ಮಾಡಿದರು. ಗ್ನಾ ಎಂಬ ದೇವತೆಗಳು ಕತ್ತರಿಸತಕ್ಕ ಸ್ಥಳಗಳಲ್ಲಿ ಕತ್ತರಿಸಿ ದರು ಮತ್ತು ಅನೇಕ ಉತ್ತರಾದ ದೇವತೆಗಳು ಕೊನೆಗಳ ದಾರಗಳನ್ನೂ ಪಕ್ಕಗಳ ದಾರಗಳನ್ನೂ ಸರಿಪಡಿಸಿಕೊಟ್ಟರು.

ಮಂತ್ರ—ದೇವೀರ್ದೇವಾಯ ಪರಿಧೀ ಸವಿತ್ರೇ ಮಹತ್ತದಾಸಾಮ ಭವನ್ಮಹಿತ್ವನಂ॥

ತಾತ್ಪರ್ಯ—ಸವಿತೃದೇವನ ವಸ್ತ್ರ ಪರಿಧಾನ ಕಾಲದಲ್ಲಿ ಪೂರ್ವೋಕ್ತ ವಾದ ದೇವತೆಗಳು ಮಹಿಮಾಯುಕ್ತವಾದ ವಸ್ತ್ರವನ್ನು ಹೇಗೆ ನಿರ್ಮಿಸಿದರೋ ಅದರಂತೆಯೇ ಈಗ ಈ ವಟುವಿಗೆ ಉಡಿಸುವ ವಸ್ತ್ರವೂ ಮಹಿಮಾಯುಕ್ತ ವಾಗಲಿ. ಯಾ ಅಕೃಂತನ್ನಿತಿ ತಿಸೃಭಿಃವಾಸಃ ಪರಿಧಾಪ್ಯ॥

ಮಂತ್ರ—ಯಾ ಅಕೃಂತನ್ನವಯನ್ ಯಾ ಅತನ್ವತ ಯಾಶ್ಚ ದೇವೀ ರಂತಾ ನಭಿತೋ ದದಂತ। ತಾಸ್ತ್ವಾ ದೇವೀರ್ಜರಸೇ ಸಂವ್ಯಯಂತ್ವಾ ಯುಷ್ಮಾನಿದಂ ಪರಿಧತ್ಸ್ವವಾಸಃ॥

ತಾತ್ಪರ್ಯ—ಎಲೈ ವಸ್ತ್ರವೇ, ರೇವತ್ಯಾದಿ ದೇವತೆಗಳು ಶುದ್ಧಿ ಮಾಡಿಕೊಟ್ಟ ಹತ್ತಿಯಿಂದ ಕೃತ್ತಿಕಾದಿ ದೇವತೆಗಳು ನೂಲನ್ನು ತೆಗೆದು ಧಿಯಾದಿ ದೇವತೆಗಳಿಂದ ನೂಲನ್ನು ಸೇರಿಸಿ, ವಸ್ತ್ರವನ್ನು ರಚಿಸಲಾಗಿ ಉಕ್ತರಾದ ದೇವತೆಗಳು ಆ ವಸ್ತ್ರದ ಕೊನೆಯ ಅಂಚುಗಳನ್ನು ನಿರ್ಮಿಸಿ ದರೋ, ಆ ದೇವತೆಗಳು ನಿನ್ನನ್ನು ಮುಪ್ಪಾಗುವವರೆವಿಗೂ ವಸ್ತ್ರವನ್ನು ಧರಿಸುವಂತೆ ಅನುಗ್ರಹಿಸಲಿ. ನೀನೂ ಸಹ ಆಯುಷ್ಮಂತನಾಗಿ ಈ ವಸ್ತ್ರ ವನ್ನು ಧರಿಸು.

ಮಂತ್ರ—ಪರಿಧತ್ತ ಧತ್ತವಾಸಸೈನಗ್ಂ ಶತಾಯುಷಂ ಕೃಣುತ ದೀರ್ಘಮಾಯುಃ । ಬೃಹಸ್ಪತಿಃ ಪ್ರಾಯಚ್ಛದ್ವಾಸ ಏತತ್ಸೋಮಾಯ ರಾಜ್ಞೇಪರಿಧಾತವಾವು ॥

ತಾತ್ಪರ್ಯ—ಎಲೈ ರೇವತ್ಯಾದಿ ದೇವತೆಗಳೇ ಈ ಕುಮಾರನನ್ನು ವಸ್ತ್ರದಿಂದ ಆಚ್ಛಾದಿಸಿ ವಸ್ತ್ರವನ್ನು ಧಾರಣೇ ಮಾಡಿಸಿದ ಅನಂತರ ಈ ಕುಮಾರನನ್ನು ನೂರು ವರ್ಷ ಬದುಕುವಂತೆ ಮಾಡಿ ದೀರ್ಘಾಯುಸ್ಸಿಗೆ ಕಾರಣವಾದ ಈ ವಸ್ತ್ರವನ್ನು ಬೃಹಸ್ಪತಿಯು ಸೋಮರಾಜನಿಗೆ ಧರಿಸುವುದ ಕ್ಕಾಗಿ ಕೊಟ್ಟನು. ಆದರಂತೆ ಈ ವಸ್ತ್ರವೂ ಕುಮಾರನಿಗೆ ದೀರ್ಘಾಯುಷ್ಯ ವನ್ನು ಕೊಡಲಿ.

ಮಂತ್ರ—ಜರಾಂಗಚ್ಛಾಸಿ ಪರಿಧತ್ಸ್ವ ವಾಸೋಭವಾ ಕೃಷ್ಟೀನಾ ಮಭಿಶಸ್ತಿಪಾವಾ । ಶತಂ ಚ ಜೀವ ಶರದಃ ಸುವರ್ಚಾರಾಯಶ್ಚ ಪೋಷ

ಮುಖಸಂವ್ಯಯಸ್ವ ॥ ಪರಿಧಾಸ್ಯೇಚಸ್ವ ॥

ತಾತ್ಪರ್ಯ——ಮುಪ್ಪಾಗುವವರೆವಿಗೂ ಈ ವಸ್ತ್ರವನ್ನು ಧರಿಸುವವನಾಗು. ಮತ್ತು ಬಾಂಧು ಜನರನ್ನು ರಕ್ಷಿಸುವವನಾಗು. ನೂರು ವರ್ಷ ಕಾಲ ವರ್ಚಸ್ಸಿನಿಂದ ಕೂಡಿದವನಾಗಿ ಧನವನ್ನು ರಕ್ಷಿಸುವುದರ ಮೂಲಕ ಸಿರಿವಂತನಾಗಿ ವಸ್ತ್ರದಂತೆ ಸಂಪದ್ಯುಕ್ತನಾಗಿ ಬಾಳು. ಮೇಲೆ ಹೇಳಿದ ಮಂತ್ರದಿಂದ ವಟುವಿಗೆ ವಸ್ತ್ರಧಾರಣೆ ಮಾಡಿಸಿ. ಆಚಮನ ಮಾಡಿಸಿ ಮುಂದಿನ ಮಂತ್ರದಿಂದ ಅಭಿಮಂತ್ರಣೆ (ವಟುವನ್ನು ನೋಡುತ್ತಾ ಹೇಳುವುದು) ಮಾಡಬೇಕು. ಪರಿಹಿತಮುತ್ತರಮಾಸು ಮಂತ್ರಯತೇ ॥

ಮಂತ್ರ—ಪರೀದಂ ವಾಸೋ ಅಧಿಧಾ ಸ್ವಸ್ತಯೇಽಭೂರಾಪೀ ನಾಮಭಿಶಸ್ತಿಪಾವಾ । ಶತಂಚಜೀವ ಶರದಃ ಪುರೂಚೀರ್ವಸೂನಿಚಾರ್ಯೋ ವಿಭಜಾಸಿ ಜೀವನ್ ॥

ತಾತ್ಪರ್ಯ—ಎಲೈ ವಟುವೇ. ನೀನು ಶುಭಕ್ಕಾಗಿ ಈ ವಸ್ತ್ರವನ್ನು ಧರಿಸಿದವನಾಗಿದ್ದೀಯೆ. ವಸ್ತ್ರಧಾರಣಾನಂತರ ಆಪ್ತರಾದ ಜ್ಞಾತಿಗಳೇ ಮೊದಲಾದವರನ್ನು ಕಾಪಾಡುವವನಾಗು ಬಹು ವಿಧಗಳಾದ ಸಂಪತ್ತುಗಳಿಗೆ ಸ್ವಾಮಿಯಾಗಿ ಆಪ್ತೇಷ್ಟರುಗಳಿಗೆ ಆ ದ್ರವ್ಯವನ್ನು ಹಂಚುವುದರ ಮೂಲಕ ಸಂಪನ್ನನಾಗಿ ನೂರು ವರ್ಷಗಳ ಕಾಲ ಬಾಳು. ಏಕೆಂದರೆ ಲೋಕದಲ್ಲಿ ಸಂಪನ್ನನ ಜೀವಿತವೇ ಜೀವನವೆಂದು ಪ್ರಸಿದ್ಧವಾಗಿದೆ. ಅನಂತರ ನಸೆ ಹುಲ್ಲಿನಿಂದ ತಯಾರಿಸಿದ ಮುಪ್ಪುರಿಯಿಂದ ಯುಕ್ತವಾದ ಮೂರು ಸುತ್ತು ಬರುವ ಮೌಂಜಿಯನ್ನು ಮುಂದೆ ಹೇಳುವ ಎರಡು ಮಂತ್ರಗಳಿಂದ ಆಚಾರ್ಯನು ವಟುವಿಗೆ ಧಾರಣೆ ಮಾಡಿಸಿ. ಅನಂತರ ವಟುವಿನಿಂದಲೂ ಈ ಎರಡು ಮಂತ್ರಗಳನ್ನು ಹೇಳಿಸಬೇಕು. ಮೌಂಜೀಂ ಮೇಖಲಾಂ ತ್ರಿವೃತಾಂ

ತ್ರಿಃ ಪ್ರದಕ್ಷಿಣಂ ಇಯಂ ದುರುಕ್ತಾದಿತಿ ದ್ವಾಭ್ಯಾಂ ಪರಿವೀಯ। ವಾಚಯೇತ್॥

ಮಂತ್ರ–ಇಯಂ ದುರುಕ್ತಾತ್ಪರಿ ಬಾಧಮಾನಾಶರ್ಮ ವರೂಥಂ ಪುನತೀನ ಆಗಾತ್। ಪ್ರಾಣಾಪಾನಾಭ್ಯಾಂ ಬಲಮಾಭರಂತೀಪ್ರಿಯಾ ದೇವಾನಾಗ್ಂ ಸುಭಗಾಮೇಖಲೇಯಂ॥

ತಾತ್ಪರ್ಯ–ಶ್ರೇಷ್ಠವಾದ ವರ್ಚಸ್ಸಿನಿಂದ ಕೂಡಿದ ಈ ಮೌಂಜಿಯು ನನ್ನ ಸುತ್ತಲೂ ಬರುವ ಕೆಟ್ಟ ಮಾತುಗಳನ್ನು ಪರಿಹರಿಸಲಿ. ಉತ್ತಮವಾದ ಮನೆಯನ್ನೂ, ಶ್ರೇಷ್ಠವಾದ ವಸ್ತುಗಳನ್ನೂ ಸಹ ಶೋಧಿಸಿ ನಮ್ಮನ್ನು ಸೇರುವಂತೆ ಮಾಡಲಿ, ಪ್ರಾಣ ಅಪಾನಗಳಿಂದ ಬಲವನ್ನು ತಂದುಕೊಡ್ವುದರ ಮೂಲಕ ದೇವತೆಗಳಿಗೆ ಪ್ರಿಯವಾದ ಈ ಮೇಖಲೆಯು ನನಗೂ ಪ್ರಿಯವಾಗಲಿ.

ಮಂತ್ರ–ಋತಸ್ಯ ಗೋಪ್ತ್ರೀ ತಪಸಃ ಪರಸ್ಪೀ ಘ್ನತೀರಕ್ಷಃ ಸಹಮಾನಾ ಅರಾತೀಃ। ಸಾನಸ್ಸಮಂತ ಮನು ಪರೀಹಿ ಭದ್ರಯಾ ಭರ್ತಾರಸ್ತೇ ಮೇಖಲೇ ಮಾರಿಷಾಮ॥

ತಾತ್ಪರ್ಯ–ಎಲೈ ಮೇಖಲಯೇ, ನೀನು ಯಜ್ಞವನ್ನು ಕಾಪಾಡತಕ್ಕವಳು. ತಪಸ್ಸನ್ನು ಉತ್ಕೃಷ್ಟವಾಗಿ ಕಾಪಾಡತಕ್ಕವಳು. ರಾಕ್ಷಸರನ್ನು ಸಂಹರಿಸತಕ್ಕವಳು. ಶತ್ರುಗಳನ್ನು ಸೋಲಿಸತಕ್ಕವಳು. ಈ ರೀತಿಯಾದ

ನೀನು ನಮ್ಮ ಸುತ್ತಲೂ ಕ್ರಮವಾಗಿ ಬಾ, ಮಂಗಳ ಸ್ವರೂಪಳಾದ ನಿನ್ನಿಂದ ರಕ್ಷಿಸಲ್ಪಟ್ಟ ನಾವು ನಷ್ಟರಾಗುವುದಿಲ್ಲ.

ಕೃಷ್ಣಾಜಿನವನ್ನು ಮುಂದಿನ ಮಂತ್ರದಿಂದ ಆಚಾರ್ಯನು ವಟುವಿಗೆ ಧಾರಣೆ ಮಾಡಿಸಿ, ವಟುವಿನಿಂದಲೂ ಆ ಮಂತ್ರವನ್ನು ಹೇಳಿಸಬೇಕು. ಅಜಿನಂ ಮಿತ್ರಸ್ಯೇತಿ ಪ್ರಕ್ಷಿಪ್ಯ ॥

ಮಂತ್ರ—ಮಿತ್ರಸ್ಯ ಚಕ್ಷುರ್ಧರುಣಂ ಬಲೀಯ ಸ್ತೇಜೋಯಶಸ್ವಿ ಸ್ಥವಿರಗ್ಂ ಸಮಿದ್ಧಂ। ಅನಾಹನಸ್ಯಂ ವಸನಂ ಜರಿಷ್ಣು ಪರೀದಂ ವಾಜ್ಯ ಜಿನಂ ದಧೇಹಂ॥ (ವಾಚಯೇತ್).

ತಾತ್ಪರ್ಯ — ಉತ್ತರೀಯವಾಗಿ ಕೃಷ್ಣಾಜಿನವನ್ನು ಧರಿಸುವುದರ ಮೂಲಕ ದೀರ್ಘಾಯುಷ್ಮಂತನಾಗಿ ಸೂರ್ಯನ ಪ್ರಕಾಶವನ್ನು ನೋಡುವುದ ರಿಂದ ಈ ಅಜಿನವು ಸೂರ್ಯನ ಚಕ್ಷುವಾಗಿಯೂ, ಇದನ್ನು ಧರಿಸುವುದರಿಂದ ಅತ್ಯಂತ ಶ್ರೇಷ್ಠವಾದ ತೇಜಸ್ಸುಂಟಾಗುವುದರಿಂದಲೂ, ಸ್ವತಃ ಯಶಸ್ಸುಳ್ಳ ದ್ದಾಗಿಯೂ ಅತ್ಯಂತ ಹಿರಿಮೆಯುಳ್ಳದ್ದೂ, ಪ್ರಕಾಶವುಳ್ಳದ್ದೂ, ಧೂರ್ತರಿಗೆ ಅಯೋಗ್ಯವಾದದ್ದೂ ಆದ ಈ ಉತ್ತರೀಯವನ್ನು ಧರಿಸುವುದರಿಂದ ಮುಪ್ಪಾ ಗುವವರೆವಿಗೂ ಇರುವಂತೆ ಮಾಡುವ ಅನ್ನವನ್ನೂ ಸಹ ಕೊಡುವ ಈ ಅಜಿನ ವನ್ನು ನಾನು ಸುತ್ತಲೂ ಧರಿಸುತ್ತೇನೆ. ಆಚಾರ್ಯನು ಮುಂದೆ ಹೇಳುವ ಮಂತ್ರದಿಂದ ಅಗ್ನಿಗೆ ಉತ್ತರದಲ್ಲಿ ದರ್ಭೆಗಳನ್ನು ಪ್ರಾಗಗ್ರವಾಗಿ ಹಾಕಿ ಆ ದರ್ಭೆಗಳ ಮೇಲೆ ವಟುವನ್ನು ತನಗೆ ಅಭಿಮುಖವಾಗಿ ಕೂರಿಸಿ. ವಟುವಿ ನಿಂದಲೂ ಈ ಮಂತ್ರವನ್ನು ಹೇಳಿಸಬೇಕು.

ಉತ್ತರೇಣಾಗ್ನಿಂ ದರ್ಭಾನ್ ಸಗ್ಂಸ್ತೀರ್ಯ। ತೇಷ್ವಾಗಂ ತ್ರೇತ್ಯೈನ ಮುಪಸ್ಥಾಪ್ಯ॥

ಮಂತ್ರ ಆಗಂತ್ರಾ ಸಮಗನ್ಮಹಿ ಪ್ರಸುಮೃತ್ಯುಂ ಯುಯೋತನ ।
ಅರಿಷ್ಟಾಸ್ಸಂಚರೇಮಹಿ ಸ್ವಸ್ತಿಚರತಾ ದಿಹ ಸ್ವಸ್ತ್ಯಾಗೃಹೇಭ್ಯಃ ॥
ವಾಚಯೇತ್ ॥

ತಾತ್ಪರ್ಯ – ಬರುತ್ತಿರುವ ಆಚಾರ್ಯರ ಜೊತೆಯಲ್ಲಿ ಸೇರಿಕೊಳ್ಳುತ್ತೇವೆ. ಹಾಗೆ ಸೇರಿದ ಅನಂತರ ಮೃತ್ಯುವನ್ನು ಬಹಳ ಚೆನ್ನಾಗಿ ಬೇರ್ಪಡಿಸುತ್ತೇವೆ. ನಾಶರಹಿತವಾಗಿ ಓಡಾಡುತ್ತೇವೆ. ಆಚಾರ್ಯರೂ ಸಹ ಸುಖವಾಗಿ ಓಡಾಡಲಿ. ನನಗೂ ಕೂಡ ಗೃಹಸ್ಥಾಶ್ರಮವನ್ನು ಸ್ವೀಕರಿಸುವವರೆವಿಗೂ ಈ ಬ್ರಹ್ಮಚರ್ಯಾಶ್ರಮದಲ್ಲಿ ಮಂಗಳವುಂಟಾಗಲಿ.

ಆಚಾರ್ಯನು ನೀರಿನಿಂದ ಕೂಡಿದ ತನ್ನ ಬೊಗಸೆಯನ್ನು ಕುಮಾರನ ಬೊಗಸೆಯಲ್ಲಿ ನೀರನ್ನು ಮುಂದಿನ ಮಂತ್ರದಿಂದ ಸುರಿದು ಮೂರು ಸಲ ಕುಮಾರನಿಗೆ ಆ ನೀರಿನಿಂದ ಪ್ರೋಕ್ಷಿಸಿ ವಟುವಿನಿಂದಲೂ ಆ ಮಂತ್ರವನ್ನು ಹೇಳಿಸಬೇಕು. ಉದಕಾಂಜಲಿಮಸ್ಯಾಂ ಜಲಾವಾನೀಯ ತಾಭಿಃ ಸಮುದ್ರಾದೂರ್ಮಿರಿತಿತ್ರಿಃ ಪ್ರೋಕ್ಷ್ಯವಾಚಯೇತ್ ॥

ಮಂತ್ರ—ಸಮುದ್ರಾದೂರ್ಮಿರ್ಮಧುಮಾಗ್ಂ ಉದಾರದುಪಾಗ್ಂ ಶುನಾ ಸಮಮೃತತ್ವಮಶ್ಯಾಂ। ಇಮೇನುತೇ ರಶ್ಮಯಃ ಸೂರ್ಯಸ್ಯ ಯೇಭಿಃ ಸಪಿತ್ವಂ ಪಿತರೋನ ಆಯನ್ ॥

ತಾತ್ಪರ್ಯ—ಆಚಾರ್ಯನಿಂದ ಪ್ರೋಕ್ಷಿಸಲ್ಪಟ್ಟ ಜಲಬಿಂದುಗಳು ನನ್ನಲ್ಲಿ ಬಿದ್ದವು. ಆ ಉದಕ ಬಿಂದುಗಳು ಸಮುದ್ರದಿಂದಲೇ ಎದ್ದ ಸುಖಕರವಾದ ಅಲೆಗಳಿಂದ ಉಂಟಾಗಿ ನನ್ನ ಅಭಿಮುಖವನ್ನು ಸೇರಿತು. ಪ್ರಕಾಶಮಾನ

ವಾದ ಆ ಅಲೆಗಳಿಂದ ಅಮೃತತ್ವವನ್ನು ಚೆನ್ನಾಗಿ ಅನುಭವಿಸುತ್ತೇನೆ. ಅಲೆಗಳಿಂದ ಉಂಟಾಗುವ ಬಿಂದುಗಳಿಗೆ ಕಾರಣವಾದ ಈ ಸೂರ್ಯರಶ್ಮಿಗಳು ನನ್ನ ಮುಖವನ್ನು ಸೇರಿದವು. ಈ ನೀರಿನ ಹನಿಗಳಿಂದಲೂ ಸೂರ್ಯರಶ್ಮಿಗಳಿಂದಲೂ ನಮ್ಮ ಪಿತೃಗಳಾದ ಆಂಗೀರಸ ಋಷಿಗಳು ದೇವತೆಗಳ ಜೊತೆಯಲ್ಲಿ ಸಹ ಸೋಮಪಾನ ಮಾಡಿದರು. ಈ ರೀತಿ ಆ ಋಷಿಗಳಿಗೆ ಸಹ ಸೋಮಪಾನಕ್ಕೆ ಕಾರಣವಾದ ಬಿಂದುಗಳು ನನ್ನಲ್ಲಿ ಬಿದ್ದಿವೆ. ಆ ಬಿಂದುಗಳಿಂದ ನಾನೂ ಸಹ ಅಮೃತತ್ವವನ್ನು ಅನುಭವಿಸುತ್ತೇನೆ. ಅಗ್ನಿಷ್ಟೇ ಎಂಬ ಹತ್ತು ಮಂತ್ರಗಳಿಂದ ಕುಮಾರನ ಬಲ ಹಸ್ತವನ್ನು ಆಚಾರ್ಯನು ಹಿಡಿದುಕೊಳ್ಳಬೇಕು. ಅಗ್ನಿಷ್ಟ ಇತಿ ದಶಭಿಃ ಕುಮಾರಸ್ಯ ಸಕೃತ್ ದಕ್ಷಿಣ ಹಸ್ತಂ ಗೃಹ್ಣೀಯಾತ್ ॥

ಮಂತ್ರ— ಅಗ್ನಿಷ್ಟೇ ಹಸ್ತಮಗ್ರಭೀತ್ ॥

ತಾತ್ಪರ್ಯ—ಆಚಾರ್ಯನಾದ ನಾನು ಶಿಷ್ಯನಾದ ನಿನ್ನ ಬಲಗೈಯನ್ನು ಹಿಡಿದುಕೊಳ್ಳುತ್ತೇನೆ. ಈ ಹಸ್ತಗ್ರಹಣವು ಅಗ್ನ್ಯಾದಿ ದೇವತೆಗಳೇ ಬಂದು ನಿನ್ನ ಹಸ್ತಗ್ರಹಣವನ್ನು ಮಾಡಿದಂತಾಗಲಿ. ಅಗ್ನಿಯು ನಿನ್ನ ಹಸ್ತವನ್ನು ಗ್ರಹಣ ಮಾಡಲಿ.

ಮಂತ್ರ— ಸೋಮಸ್ತೇ ಹಸ್ತಮಗ್ರಭೀತ್ ॥

ತಾತ್ಪರ್ಯ—ಸೋಮನು ನಿನ್ನ ಹಸ್ತವನ್ನು ಗ್ರಹಣ ಮಾಡಲಿ.

ಮಂತ್ರ—ಸವಿತಾ ತೇ ಹಸ್ತಮಗ್ರಭೀತ್ ॥

ತಾತ್ಪರ್ಯ—ದ್ವಾದಶಾದಿತ್ಯರಲ್ಲಿ ಒಬ್ಬನಾದ ಸವಿತೃವು ನಿನ್ನ ಕೈಯನ್ನು ಗ್ರಹಣ ಮಾಡಲಿ.

ಮಂತ್ರ—ಸರಸ್ವತೀ ತೇ ಹಸ್ತಮಗ್ರಭೀತ್ ॥

ತಾತ್ಪರ್ಯ—ಸರಸ್ವತಿಯು ನಿನ್ನ ಹಸ್ತಗ್ರಹಣ ಮಾಡಲಿ.

ಮಂತ್ರ—ಪೂಷಾ ತೇ ಹಸ್ತಮಗ್ರಭೀತ್ ॥

ತಾತ್ಪರ್ಯ—ಆದಿತ್ಯರಲ್ಲೊಬ್ಬನಾದ ಪೂಷಣನು ನಿನ್ನ ಹಸ್ತಗ್ರಹಣ ಮಾಡಲಿ.

ಮಂತ್ರ—ಅರ್ಯಮಾ ತೇ ಹಸ್ತಮಗ್ರಭೀತ್ ॥

ತಾತ್ಪರ್ಯ—ಆದಿತ್ಯರಲ್ಲಿ ಒಬ್ಬನಾದ ಅರ್ಯಮನು ನಿನ್ನ ಹಸ್ತ ಗ್ರಹಣ ಮಾಡಲಿ.

ಮಂತ್ರ—ಅಗ್‌ಂಶುಸ್ತೇ ಹಸ್ತಮಗ್ರಭೀತ್ ॥

ತಾತ್ಪರ್ಯ—ಆದಿತ್ಯರಲ್ಲಿ ಒಬ್ಬನಾದ ಅಂಶುಮಂತನು ನಿನ್ನ ಹಸ್ತ ಗ್ರಹಣಮಾಡಲಿ.

ಮಂತ್ರ—ಭಗಸ್ತೇ ಹಸ್ತಮಗ್ರಭೀತ್ ॥

ತಾತ್ಪರ್ಯ—ಆದಿತ್ಯರಲ್ಲಿ ಒಬ್ಬನಾದ ಭಗನು ನಿನ್ನ ಹಸ್ತಗ್ರಹಣ ಮಾಡಲಿ.

ಮಂತ್ರ—ಮಿತ್ರಸ್ತೇ ಹಸ್ತಮಗ್ರಭೀತ್ ॥

ತಾತ್ಪರ್ಯ--ಆದಿತ್ಯರಲ್ಲಿ ಒಬ್ಬನಾದ ಮಿತ್ರನು ನಿನ್ನ ಹಸ್ತಗ್ರಹಣ ಮಾಡಲಿ.

ಮಂತ್ರ--ಮಿತ್ರಸ್ತ್ವಮಸಿ ಧರ್ಮಣಾಽಗ್ನಿರಾಚಾರ್ಯಸ್ತವ ।

ತಾತ್ಪರ್ಯ--ನೀನು ಧರ್ಮದಿಂದ ಮಿತ್ರನಾಗಿದ್ದೀಯೆ. ದೇವತೆಗಳಿಗೆ ಯಾವ ರೀತಿ ಮಿತ್ರನಾಗಿರಬೇಕೋ ಆ ರೀತಿ ಮಿತ್ರನಾಗಿದ್ದೀಯೆ. ಒಂದು ಸಲ ದೇವತೆಗಳು ಮಿತ್ರನನ್ನು ಕುರಿತು ಹೇಳಿದರು, ಸೋಮರಾಜನನ್ನು ಕೊಲ್ಲೋಣ ಎಂದು. ಅದಕ್ಕೆ ಮಿತ್ರನು ಹೇಳಿದನು, ನಾನು ಎಲ್ಲರಿಗೂ ಮಿತ್ರನಾದ್ದರಿಂದ ನಾನು ಕೊಲ್ಲಲಾರೆ ಎಂದು. ಇದೇ ರೀತಿ ಎಲ್ಲರ ಸ್ನೇಹಿತ ನಾದ ಅಗ್ನಿಯೂ, ಮಿತ್ರನೂ ಸಹ ನಿನಗೆ ಆಚಾರ್ಯಸ್ಥಾನೀಯರು.

ಅಗ್ನಯೇತ್ವಾ ಎಂಬ ಹನ್ನೊಂದು ಮಂತ್ರಗಳ ಕೊನೆಯಲ್ಲೂ ಆಚಾರ್ಯನು ಕುಮಾರನ ಬಲ ಹಸ್ತವನ್ನು ಹಿಡಿದು ಆಯಾ ದೇವತೆಗಳ ರಕ್ಷಣೆಗಾಗಿ (ಬೇರೆ ಬೇರೆ) ಒಪ್ಪಿಸಬೇಕು. ಅಗ್ನಯೇತ್ವೇತಿ ಪ್ರತಿ ಮಂತ್ರಂ ದೇವತಾಭ್ಯೋ ರಕ್ಷಣಾಯದತ್ವಾ

ಮಂತ್ರ—ಅಗ್ನಯೇತ್ವಾ ಪರಿದದಾಮಿ ನಾರಾಯಣಶರ್ಮ ।

ತಾತ್ಪರ್ಯ—ನಿನ್ನನ್ನು ರಕ್ಷಿಸುವುದಕ್ಕೋಸ್ಕರ ಅಗ್ನಿಗೆ ಕೊಡುತ್ತೇನೆ.

ಮಂತ್ರ—ಸೋಮಾಯತ್ವಾ ಪರಿದದಾಮಿ ನಾರಾಯಣಶರ್ಮ ।

ತಾತ್ಪರ್ಯ—ನಿನ್ನ ರಕ್ಷಣಾರ್ಥವಾಗಿ ಸೋಮನಿಗೆ ಕೊಡುತ್ತೇನೆ.

ಮಂತ್ರ—ಸವಿತ್ರೇತ್ವಾ ಪರಿದದಾಮಿ ನಾರಾಯಣಶರ್ಮ ।

ತಾತ್ಪರ್ಯ—ಸವಿತೃವಿಗೆ ನಿನ್ನನ್ನು ಕೊಡುತ್ತೇನೆ.

ಮಂತ್ರ—ಸರಸ್ವತ್ಯೈತ್ವಾ ಪರಿದದಾಮಿ ನಾರಾಯಣಶರ್ಮನ್ ।

ತಾತ್ಪರ್ಯ—ಸರಸ್ವತಿಗೆ ನಿನ್ನನ್ನು ಒಪ್ಪಿಸುತ್ತೇನೆ.

ಮಂತ್ರ—ಮೃತ್ಯವೇತ್ವಾ ಪರಿದದಾಮಿ ನಾರಾಯಣಶರ್ಮನ್ ।

ತಾತ್ಪರ್ಯ—ನಿನ್ನನ್ನು ರಕ್ಷಿಸಲು ಮೃತ್ಯುವಿಗೆ ಕೊಡುತ್ತೇನೆ.

ಮಂತ್ರ—ಯಮಾಯತ್ವಾ ಪರಿದದಾಮಿ ನಾರಾಯಣಶರ್ಮನ್ ।

ತಾತ್ಪರ್ಯ — ನಿನ್ನನ್ನು ರಕ್ಷಿಸುವುದಕ್ಕೋಸ್ಕರ ಯಮನಿಗೆ ಕೊಡುತ್ತೇನೆ.

ಮಂತ್ರ—ಗದಾಯತ್ವಾ ಪರಿದದಾಮಿ ನಾರಾಯಣಶರ್ಮನ್ ।

ತಾತ್ಪರ್ಯ—ರಕ್ಷಣಾರ್ಥ ಗದೆಗೆ ನಿನ್ನನ್ನು ಕೊಡುತ್ತೇನೆ.

ಮಂತ್ರ—ಅಂತಕಾಯತ್ವಾ ಪರಿದದಾಮಿ ನಾರಾಯಣಶರ್ಮನ್ ॥

ತಾತ್ಪರ್ಯ—ರಕ್ಷಣಾರ್ಥವಾಗಿ ನಿನ್ನನ್ನು ಅಂತಕನಿಗೆ ಕೊಡುತ್ತೇನೆ.

ಮಂತ್ರ—ಅದ್ಭ್ಯಸ್ತ್ವಾ ಪರಿದದಾಮಿ ನಾರಾಯಣಶರ್ಮನ್ ॥

ತಾತ್ಪರ್ಯ—ಅಬ್ದೇವತೆಗೆ ನಿನ್ನನ್ನು ಕೊಡುತ್ತೇನೆ.

ಮಂತ್ರ--ಓಷಧೀಭ್ಯಸ್ತ್ವಾ ಪರಿದದಾಮಿ ನಾರಾಯಣಶರ್ಮನ್ ॥

ತಾತ್ಪರ್ಯ – ಓಷಧಿಗಳಿಗೆ ನಿನ್ನನ್ನು ಕೊಡುತ್ತೇನೆ.

ಮಂತ್ರ-ಪೃಥಿವ್ಯೈ ತ್ವಾ ಸವೈಶ್ವಾನರಾಯೈ ಪರಿದದಾಮಿ ನಾರಾಯಣ ಶರ್ಮನ್ ॥

ತಾತ್ಪರ್ಯ—ವೈಶ್ವಾನರ ಸಹಿತವಾದ ಭೂದೇವಿಗೆ ರಕ್ಷಣಾರ್ಥವಾಗಿ ನಿನ್ನನ್ನು ಕೊಡುತ್ತೇನೆ.

ಅನಂತರ ಸಮುಹೂರ್ತದಲ್ಲಿ ಆಚಾರ್ಯನು ವಟುವನ್ನು ತನ್ನ ತೊಡೆಯಲ್ಲಿ "ದೇವಸ್ಯ ತ್ವಾ" ಎಂಬ ಮಂತ್ರದಿಂದ ಕುಳ್ಳಿರಿಸಿಕೊಂಡು ಅಂತಃಪಟವನ್ನು ಹಿಡಿದು ಚೂರ್ಣಿಕಾ ಮಂಗಳಾಷ್ಟಕಗಳನ್ನು ಪಠಿಸಿ "ಸುಪ್ರಜಾಃ" ಎಂಬ ಮಂತ್ರವನ್ನು ವಟುವಿನ ಬಲಕಿವಿಯೊಳಗೆ ಜಪಿಸಿ, ಸಂಪ್ರದಾಯಾನುಸಾರ ಜೀರಿಗೆ ಬೆಲ್ಲವನ್ನು ಆಚಾರ್ಯನಾದ ತಂದೆ ಮತ್ತು ತಾಯಿ ಕುಮಾರನ ಶಿರಸ್ಸಿನಲ್ಲಿಟ್ಟು, ಪರದೆಯನ್ನು ತೆಗೆದು ಬ್ರಾಹ್ಮಣ ಸುವಾಸಿನಿಯರಿಂದ ಅಕ್ಷತಾಶೀರ್ವಚನವನ್ನು ಮಾಡಿಸಬೇಕು.

ತತಃ ಸುಮುಹೂರ್ತೇ ದೇವಸ್ಯತ್ವೇತಿಯಜುಷಾ ಕುಮಾರಂ ಸ್ವಾಂಕ ಉಪವೇಶ್ಯ ॥

ಮಂತ್ರ-ದೇವಸ್ಯತ್ವಾ ಸವಿತುಃ ಪ್ರಸವ ಉಪನಯೇ ನಾರಾಯಣ ಶರ್ಮನ್ ಮಂಗಳಾಷ್ಟಕಾನಿ ಪಾಠಯಿತ್ವಾ ।

ತಾತ್ಪರ್ಯ—ಸರ್ವ ಪ್ರೇರಕನಾದ ಸವಿತೃದೇವನ ಅನುಜ್ಞೆಯಾಗಲಾಗಿ ನಿನ್ನನ್ನು ನಾನು ಸಮೀಪಕ್ಕೆ ಕರೆದುಕೊಳ್ಳುತ್ತೇನೆ. ಸುಪ್ರಜಾ ಇತಿ ದಕ್ಷಿಣೇ ಕರ್ಣೇ ಜಪತಿ ॥

ಮಂತ್ರ – ಸುಪ್ರಜಾಃ ಪ್ರಜಯಾಭೂಯಾಃ ಸುವಿರೋ ವೀರೈಸ್ಸು

ವರ್ಚಾ ವರ್ಚಸಾ ಸುಪೋಷಃ ಪೋಷೈಃ ॥

ತಾತ್ಪರ್ಯ–ಎಲೈ ಬ್ರಹ್ಮಚಾರಿಯೇ, ನೀನು ಪುತ್ರರನ್ನು ಪಡೆದ ಎಲ್ಲರಿಗಿಂತ ಶ್ರೇಷ್ಠನಾಗಿರು. ವರ್ಚಸ್ವಿಗಳಾದ ಎಲ್ಲರಲ್ಲೂ ಶ್ರೇಷ್ಠನಾಗಿರು. ಪೋಷಣೆ ಮಾಡತಕ್ಕ ಎಲ್ಲರಿಗಿಂತಲೂ ಶ್ರೇಷ್ಠ ಪೋಷಕನಾಗು. ಮುಂದಿನ ಮಂತ್ರವನ್ನು ಕುಮಾರನು ಹೇಳಬೇಕು. ಬ್ರಹ್ಮಚರ್ಯಮಾಗಾಮಿತಿ ಪ್ರಸೂತ ಇತ್ಯಂತಂ ಕುಮಾರ ಆಹ ॥

ಮಂತ್ರ—ಬ್ರಹ್ಮಚರ್ಯ ಮಾಗಾಮುಪಮಾನಯಸ್ವ ದೇವೇನ ಸವಿತ್ರಾ

ಪ್ರಸೂತಃ ॥ ಪ್ರಷ್ಟಂ ಪರಸ್ಯ ಪ್ರತಿವಚನಂ ಕುಮಾರಸ್ಯ ॥

ತಾತ್ಪರ್ಯ—ವೇದಗ್ರಹಣ ಮಾಡತಕ್ಕ ಬ್ರಹ್ಮಚರ್ಯ ವ್ರತವನ್ನು ಹೊಂದಿದ್ದೇನೆ. ಈ ರೀತಿ ಬ್ರಹ್ಮಚರ್ಯ ವ್ರತಸ್ಥನಾದ ನನ್ನನ್ನು ಸರ್ವ ಪ್ರೇರಕನಾದ ಸವಿತೃ ದೇವನ ಅನುಜ್ಞೆಯನ್ನು ಹೊಂದಿದ ಆಚಾರ್ಯನಾದ ನೀನು ಹತ್ತಿರ ಕರೆದುಕೋ.

ಆಚಾರ್ಯನು ಕೇಳುವ ಪ್ರಶ್ನೆಗಳಿಗೆ ಕುಮಾರನು ಉತ್ತರವನ್ನು ಹೇಳುತ್ತಾನೆ.

ಆಚಾರ್ಯ: ಮಂತ್ರ—ಕೋನಾಮಾಸಿ ?

ತಾತ್ಪರ್ಯ—ನಿನ್ನ ಹೆಸರೇನು ?

ಕುಮಾರ: ಮಂತ್ರ—ಅಸೌನಾಮಾಸ್ಮಿ (ಯಜ್ಞಶರ್ಮಾ ನಾಮಾಸ್ಮಿ!)

ತಾತ್ಪರ್ಯ – ಈ ನಾನು (ಯಜ್ಞಶರ್ಮಾ) ಹುಡುಗನ ಹೆಸರು.

ಆಚಾರ್ಯ: ಮಂತ್ರ—ಕಸ್ಯ ಬ್ರಹ್ಮಚಾರ್ಯಸ್ಯಸೌ ?॥

ತಾತ್ಪರ್ಯ—ಏತಕ್ಕೆ ಬ್ರಹ್ಮಚರ್ಯ ವ್ರತಸ್ಥನಾಗಿದ್ದೀಯೆ ?

ಕುಮಾರ : ಮಂತ್ರ––ಪ್ರಾಣಸ್ಯ ಬ್ರಹ್ಮಚಾರ್ಯಸ್ಮಿ ॥

ತಾತ್ಪರ್ಯ—ಆತ್ಮ ವಿಚಾರವನ್ನು ತಿಳಿಯುವುದಕ್ಕೆಂದು ಶಿಷ್ಯನು ಹೇಳುತ್ತಾನೆ. ಅನಂತರ ಆಚಾರ್ಯನು ಹೇಳುತ್ತಾನೆ.

ಆಚಾರ್ಯ : ಮಂತ್ರ—ಯಜ್ಞಶರ್ಮ ಏಷತೇ ದೇವ ಸೂರ್ಯ ಬ್ರಹ್ಮಚಾರೀ ತಂ ಗೋಪಾಯ ಸಮಾಮೃತೈಷತೇ ಸೂರ್ಯ ಪುತ್ರಸ್ಸದೀರ್ಘಾಯುಸ್ಸಮಾಮೃತ। ಯಾಗ್ಂ ಸ್ವಸ್ತಿಮಗ್ನಿರ್ವಾಯು ಸ್ಸೂರ್ಯಶ್ಚಂದ್ರಮಾ ಆಪೋಽನುಸಂಚರಂತಿ ತಾಗ್ಂ ಸ್ವಸ್ತಿ ಮನುಸಂಚರ ಯಜ್ಞಶರ್ಮನ್ ॥

ತಾತ್ಪರ್ಯ—ಎಲೈ ದೇವನಾದ ಸೂರ್ಯನೇ, ಈ ಮಾಣವಕನು ನಿನಗೆ ಸಂಬಂಧಪಟ್ಟ ಬ್ರಹ್ಮಚಾರಿಯು ಮರಣವನ್ನು ಹೊಂದದಿರಲಿ. ಎಲೈ ಸೂರ್ಯನೇ, ನಿನ್ನ ಮಗನಾದ ಈ ಬ್ರಹ್ಮಚಾರಿಯು ದೀರ್ಘಾಯುಷ್ಮಂತನಾಗಲಿ. ದೀರ್ಘಾಯುಷ್ಮಂತರ ಮಧ್ಯದಲ್ಲಿ ಇವನು ಮರಣವನ್ನು ಹೊಂದದಿರಲಿ. ಎಲೈ ಯಜ್ಞಶರ್ಮನೇ, ಅಗ್ನಿ, ವಾಯು, ಸೂರ್ಯ, ಚಂದ್ರ ಅಬ್ದೇವತೆಗಳು ಯಾವ ಮಂಗಳಕರವಾದ ದಾರಿಯಲ್ಲಿ ಸಂಚರಿಸುತ್ತಾರೆಯೋ ಆ ದಾರಿಯಲ್ಲೇ ನೀನೂ ಸಹ ಸಂಚಾರ ಮಾಡು. ಮುಂದಿನ ಮಂತ್ರವನ್ನು

ಕುಮಾರನಿಂದ ಹೇಳಿಸಬೇಕು. ಶೇಷಂ ಪರೋಜಪತಿ ಪ್ರತ್ಯಗಾಶಿಷಂ ಚೈನಂ ವಾಚಯತಿ ॥

ಮಂತ್ರ – ಅಧ್ವನಾಮಧ್ವಪತೇ ಶ್ರೇಷ್ಠಸ್ಯಾಧ್ವನಃ ಪಾರಮಶೀಯ ॥

ತಾತ್ಪರ್ಯ––ದುಃಖರಹಿತವಾದ ಸುಖ ಸಾಧನಕ್ಕೆ ಕಾರಣವಾದ ಅನೇಕ ಮಾರ್ಗಗಳಿಗೆ ಒಡೆಯನಾದ ಎಲೈ ಸೂರ್ಯನೇ, ನಾನು ನಿನ್ನ ಅನುಗ್ರಹದಿಂದ ಶ್ರೇಯಃ ಪ್ರಾಪ್ತಿಕರವಾದ ಬ್ರಹ್ಮಚರ್ಯ ಮಾರ್ಗದ ಕೊನೆಯನ್ನು ಅನುಭವಿಸುತ್ತೇನೆ.

ಉಪನಯನ ಪ್ರಧಾನಾಹುತಿಗಳ ೧೧ರ ಪೈಕಿ ಎರಡನೇ. ನಾಲ್ಕನೇ ಮಂತ್ರಗಳನ್ನು ಆಚಾರ್ಯನು ಹೇಳಬೇಕು. ಉಳಿದ ಒಂಭತ್ತು ಮಂತ್ರ ಗಳನ್ನೂ ಕುಮಾರನಿಂದಲೇ ಹೇಳಿಸುತ್ತಾ, ಹನ್ನೊಂದು ಆಹುತಿಗಳನ್ನೂ ಕುಮಾರನೇ ಕೊಡಬೇಕು. ಅಥ ಯೋಗಾದೀ ನವಮಂತ್ರಾ ವಾಚಯ ದ್ವಿತೀಯ ಚತುರ್ಥಾ ವಾಚಾರ್ಯ ಸ್ವಯಂಬ್ರುವ ಪ್ರತಿಮಂತ್ರಮೇಕಾದಶಾ ಜ್ಯಾಹುತೀಃ ಕುಮಾರೇಣ ಹಾವಯಿತ್ವಾ ಕುಮಾರೋ ಜುಹೋತಿ.

ಮಂತ್ರ –ಯೋಗೇ ಯೋಗೇ ತವಸ್ತರಂ ವಾಜೇ ವಾಜೇ ಹವಾಮಹೇ ।
ಸಖಾಯ ಇಂದ್ರಮೂತಯೇ ಸ್ವಾಹಾ ॥ ಇಂದ್ರಾಯೇದಂ ನಮಮ ॥

ತಾತ್ಪರ್ಯ––ಯಾವ ಯಾವ ಕಾಲದಲ್ಲಿ ಬ್ರಹ್ಮಚರ್ಯ ಕರ್ಮ ವಿಷಯವಾದ ಕೆಲಸಗಳು ನಡೆಯುತ್ತದೆಯೋ ಆಯಾ ಕಾಲದಲ್ಲಿ ರಥವಾದ ನಿನಗೆ ಪ್ರಯಾಣವುಂಟಾಗುತ್ತದೆ. ಎಲ್ಲಾ ವಿಧವಾದ ಬ್ರಹ್ಮಚರ್ಯ ಕರ್ಮ ಗಳ ಕೆಲಸಗಳಲ್ಲಿಯೂ ನಿನ್ನನ್ನು ಕರೆಯುತ್ತೇವೆ. ಬ್ರಹ್ಮಚರ್ಯ ಕರ್ಮ ಗಳು ನಡೆಯುವ ಕಾಲದಲ್ಲಿ ಉಂಟಾಗುವ ಪ್ರಯಾಣದಲ್ಲಿ ನಮ್ಮ ರಕ್ಷಣೆಗಾಗಿ ನಾನು ಇಂದ್ರನನ್ನು ಸ್ತೋತ್ರ ಮಾಡಿ, ಆತನಿಗೆ ಸ್ನೇಹಿತರಾಗುತ್ತೇನೆ. ಈ ಆಹುತಿಯು ಇಂದ್ರನಿಗೆ ಸೇರಲಿ. ತತಃ ಆಚಾರ್ಯಃ ॥

ತತಃ ಆಚಾರ್ಯಃ : ಮಂತ್ರ—ಇಮಮಗ್ನ ಆಯುಷೇ ವರ್ಚಸೇಕೃಧಿ ಪ್ರಿಯಗ್ಂ ರೇತೋವರುಣ ಸೋಮರಾಜನ್। ಮಾತೇವಾಸ್ಮಾ ಅದಿತೇ ಶರ್ಮ ಯಚ್ಛ ವಿಶ್ವೇದೇವಾಜರದಷ್ಟಿರ್ಯಥಾ ಸತ್ಸ್ವಾಹಾ॥ ಅಗ್ನೇ ವರುಣ ಸೋಮಾದಿತಿ ವಿಶ್ವೇಭ್ಯೋ ದೇವೇಭ್ಯಃ ಇದಂ ನಮಮ॥

ತಾತ್ಪರ್ಯ—ಎಲೈ ಅಗ್ನಿಯೇ, ಈ ಮಾಣವಕನು ದೀರ್ಘಾಯುಷ್ಯವುಳ್ಳವನೂ ವರ್ಚಸ್ವಿಯೂ ಆಗುವಂತೆ ಮಾಡು. ಎಲೈ ವರುಣನೇ, ನೀನು ಈ ಮಾಣವಕನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಸುಪುತ್ರನನ್ನು ಪಡೆಯುವಂತೆ ಅನುಗ್ರಹಿಸು. ಎಲೈ ಸೋಮರಾಜನೇ, ಮತ್ತು ಅದಿತಿಯೇ. ನೀವಿಬ್ಬರೂ ಈ ಮಾಣವಕನಿಗೆ ತಾಯಿಯಂತೆ ಸುಖವನ್ನು ಕೊಡುವವರಾಗಿ. ಎಲೈ ವಿಶ್ವೇದೇವತೆಗಳೇ, ನೀವೂ ಸಹ ಈ ಮಾಣವಕನು ದೀರ್ಘಾಯುಷ್ಯದಿಂದ ಬದುಕುವಂತೆ ಮಾಡಿ. ಸುಖವನ್ನು ಕೊಡಿ. ಈ ಮಂತ್ರವನ್ನು ಆಚಾರ್ಯನು ಹೇಳಿದರೆ ವಟುವನ್ನು ಕುರಿತು ಹೇಳಿದಂತೆ ಆಗುತ್ತದೆ. ಈ ಆಹುತಿಯು ಅಗ್ನಿ, ವರುಣ, ಸೋಮ, ಅದಿತಿ, ವಿಶ್ವೇದೇವತೆಗಳಿಗೆ ಸೇರಲಿ.

ತತಃ ಕುಮಾರ : ಮಂತ್ರ—ಶತಮಿನ್ನು ಶರದೋ ಅಂತಿದೇವಾ ಯತ್ರಾನಶ್ಚಕ್ರಾ ಜರಸಂತನೂನಾಂ। ಪುತ್ರಾಸೋಯತ್ರ ಪಿತರೋ ಭವಂತಿ ಮಾನೋಮಧ್ಯಾ ರೀರಿಷತಾಯುರ್ಗಂತೋಃ ಸ್ವಾಹಾ॥ ದೇವೇಭ್ಯಃ ಇದಂ॥

ತಾತ್ಪರ್ಯ—ಎಲೈ ದೇವತೆಗಳೇ, ಮನುಷ್ಯನ ಆಯುಸ್ಸೆಂದರೆ ನೂರು ವರ್ಷಗಳೆಂದೇ ಪ್ರಸಿದ್ಧವಾಗಿದೆ. ಅದು ಕೇವಲ ಅತ್ಯಲ್ಪವು. ಹೇಗೆಂದರೆ,

ನಮ್ಮ ಈ ನೂರು ವರ್ಷಗಳು ಬದುಕುವ ಶರೀರದಲ್ಲಿ ಅಂತ್ಯ ಭಾಗವನ್ನು ಅವಯುವಗಳ ಶಿಥಿಲತ್ವದಿಂದ ಮುಪ್ಪು ಬರುವಂತೆ ಮಾಡಿದ್ದೀರಿ. ಇನ್ನು ಯೌವನಕಾಲದಲ್ಲಿ ದಾರಾಪುತ್ರಾದಿ ರಕ್ಷಣೆಗಳಿಂದ ಕಳೆದು ಹೋಗುತ್ತದೆ. ಈ ರೀತಿಯಾಗಿ ಮುಪ್ಪು ಕುಟುಂಬ ಪೋಷಣೆಗಳಿಂದ ಮನುಷ್ಯನ ಆಯುಸ್ಸು ಅತ್ಯಲ್ಪವೆಂದೇ ತಿಳಿಯಬೇಕು. ಈ ರೀತಿ ಅತ್ಯಂತ ಕಡಿಮೆ ಆಯುಸ್ಸು ನನ್ನಲ್ಲಿ ಸಂಪೂರ್ಣವಾದ ನೂರು ವರ್ಷ ಆಯುಸ್ಸು ಇರುವಂತೆ ಅನುಗ್ರಹಿಸಿ. ನೂರು ವರ್ಷಗಳು ಪೂರ್ತಿಯಾದ ಮೇಲೆ ತಾನಾಗಿಯೇ ಹೋಗುವಂತೆ ಅನುಗ್ರಹಿಸಿ. ಅಷ್ಟರೊಳಗಾಗಿ ನನ್ನನ್ನು ಹಿಂಸಿಸಬೇಡಿ. ಈ ಆಹುತಿಯು ದೇವತೆಗಳಿಗೆ ಸೇರಲಿ. ತತ ಆಚಾರ್ಯ :

ಮಂತ್ರ--ಅಗ್ನಿಷ್ಟ ಆಯುಃ ಪ್ರತರಾಂ ದಧಾತ್ವಗ್ನಿಷ್ಟೇ ಪುಷ್ಟಿಂ ಪ್ರತರಾಂ ಕೃಣೋತು। ಇಂದ್ರೋ ಮರುದ್ಭಿರ್ ಋತುಧಾ ಕೃಣೋತ್ವಾದಿತ್ಯೈರ್ನ್ತೇ ವಸುಭಿರಾ ದಧಾತು ಸ್ವಾಹಾ॥ ಅಗ್ನೀಂದ್ರಮರುದಾದಿತ್ಯ ವಸುಭ್ಯಃ ಇದಂ ನಮಮ॥

ತಾತ್ಪರ್ಯ—ಎಲೈ ಮಾಣವಕನೇ, ನಿನಗೆ ಅಗ್ನಿಯು ಉತ್ತಮವಾದ ಆಯುಸ್ಸನ್ನು ಕೊಡಲಿ. ಅದೇ ಅಗ್ನಿಯು ನಿನಗೆ ಶ್ರೇಷ್ಠವಾದ ಪುಷ್ಟಿಯುನ್ನುಂಟುಮಾಡಲಿ. ಆಚಾರ್ಯನು ಈ ಮಂತ್ರವನ್ನು ಹೇಳಿದರೆ ಮಾಣವಕನನ್ನು ಕುರಿತು ಹೇಳಿದಂತಾಗುತ್ತದೆ. ಕುಮಾರನೇ ಹೇಳುವ ಪಕ್ಷದಲ್ಲಿ ಅಂತರಾತ್ಮನನ್ನು ಕುರಿತು ಶರೀರಾತ್ಮನು ಹೇಳಿದಂತಾಗುತ್ತದೆ. ಈ ಆಹುತಿಯು ಅಗ್ನಿ, ಇಂದ್ರ, ಮರುತ್ತುಗಳು ಆದಿತ್ಯವಸುಗಳಿಗೆ ಸೇರಲಿ.

ತತಃ ಕುಮಾರಃ : ಮಂತ್ರ–ಮೇಧಾಂಮಹ್ಯಮಂಗಿರಸೋ ಮೇಧಾಗ್ಂ

ಸಪ್ತರ್ಷಯೋದದುಃ। ಮೇಧಾಂಮಹ್ಯಂ ಪ್ರಜಾಪತಿರ್ಮೇಧಾಮಗ್ನಿರ್ದದಾತುಮೇ ಸ್ವಾಹಾ॥ ಅಂಗಿರಸಃ ಸಪ್ತರ್ಷಿ ಪ್ರಾಜಾಪ್ರತ್ಯಗ್ನಿಭ್ಯಃ ಇದಂನಮಮ॥

ತಾತ್ಪರ್ಯ — ನನಗೆ ಮೇಧಾಶಕ್ತಿಯನ್ನು ಅಂಗಿರಸ ಋಷಿಗಳೂ, ಸಪ್ತಋಷಿಗಳೂ ಕೊಟ್ಟರು. ನನಗೆ ಮೇಧಾಶಕ್ತಿಯನ್ನು ಪ್ರಜಾಪತಿ ದೇವತೆಯೂ, ಅಗ್ನಿ ದೇವತೆಯೂ ಸಹ ಕೊಡಲಿ. ಈ ಆಹುತಿಯು ಅಂಗಿರಸ ಋಷಿಗಳಿಗೂ ಸಪ್ತಋಷಿಗಳಿಗೂ ಪ್ರಜಾಪತಿ ದೇವತೆಗೂ, ಅಗ್ನಿ ದೇವತೆಗೂ ಸಹ ಸೇರಲಿ.

ಮಂತ್ರ—ಅಪ್ಸರಾಸುಚಯಾ ಮೇಧಾ ಗಂಧರ್ವೇಷುಚಯನ್ಮಶಃ। ದೈವೀ ಯಾ ಮಾನುಷೀ ಮೇಧಾ ಸಾಮಾಮಾವಿಶತಾದಿಹ ಸ್ವಾಹಾ॥ ಮೇಧಾಯಾ ಇದಂ ನಮಮ॥

ತಾತ್ಪರ್ಯ — ಅಪ್ಸರಸ್ಸರಲ್ಲಿರತಕ್ಕ ಮೇಧಾ ಶಕ್ತಿಯೂ, ಗಂಧರ್ವರಲ್ಲಿರತಕ್ಕಂಥ ಯಶಸ್ಸು, ದೇವತೆಗಳಲ್ಲಿರತಕ್ಕಂಥ ಮೇಧಾ ಶಕ್ತಿಯೂ, ಮನುಷ್ಯರಲ್ಲಿರತಕ್ಕಂಥ ಮೇಧಾ ಶಕ್ತಿಯೂ ಸಹ ಈ ಉಪನಯನ ಕರ್ಮದಲ್ಲಿ ನನ್ನನ್ನು ಬಂದು ಸೇರಲಿ. ಈ ಆಹುತಿಯು ಮೇಧಾದೇವಿಗೆ ಸೇರಲಿ.

ಮಂತ್ರ—ಇಮಂ ಮೇ ವರುಣ ಶ್ರುಧೀಹವಮದ್ಯಾಚ ಮೃಡಯ। ತ್ವಾಮ ವಸ್ಯುರಾಚಕೇ ಸ್ವಾಹಾ। ವರುಣಾಯೇದಂ ನಮಮ॥

ತಾತ್ಪರ್ಯ — ಎಲೈ ವರುಣನೇ, ನನ್ನ ಈ ಆಹ್ವಾನವನ್ನು ಕೇಳು. ಕೇಳಿ ಈಗಲೇ ಸುಖವನ್ನುಂಟುಮಾಡು. ನಿನ್ನಿಂದ ರಕ್ಷಿಸಲ್ಪಡುವ ನಿಮಿತ್ತ ನಾನು ನಿನ್ನನ್ನು ಸ್ತೋತ್ರಮಾಡುತ್ತೇನೆ. ಈ ಆಹುತಿಯು ವರುಣನಿಗೆ ಸೇರಲಿ.

ಮಂತ್ರ—ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತ ದಾಶಾಸ್ತೇ ಯಜಮಾನೋ ಹವಿರ್ಭಿಃ ॥ ಅಹೇಡಮಾನೋ ವರುಣೇಹಬೋಧ್ಯುರುಶಗ್ಂ ಸ ಮಾನ ಆಯುಃ ಪ್ರಮೋಷೀಃ ಸ್ವಾಹಾ ॥ ವರುಣಾಯೇದಂ ನಮಮ ॥

ತಾತ್ಪರ್ಯ—ಅನೇಕರಿಂದ ಸ್ತುತಿಸಲ್ಪಡುವ ಎಲೈ ವರುಣನೇ, ನಮ್ಮ ಆಯುಸ್ಸನ್ನು ಕಳೆಯಬೇಡ. ಕೋಪಗೊಳ್ಳದೆ ಈ ಕರ್ಮದಲ್ಲಿ ನನ್ನಿಂದ ಹೇಳಲ್ಪಡುವುದನ್ನು ತಿಳಿ. ಮುಂದೆ ಹೇಳುವ (ಹಿಂದೆ ಹೇಳಿರುವ) ಮಂತ್ರಾರ್ಥ ದಿಂದ ಪ್ರಾರ್ಥಿಸುತ್ತೇನೆ. ಮಂತ್ರದಿಂದ ಸ್ತೋತ್ರ ಮಾಡುತ್ತಾ ಹವಿಸ್ಸು ಗಳಿಂದ ಎಲ್ಲಾ ಯಜಮಾನರೂ ಅದನ್ನೇ ಆಶಿಸುತ್ತಾರೆ. ಅಂದರೆ ಮೇಲೆ ಹೇಳಿರುವ ಮಂತ್ರಾರ್ಥವು ತಮಗೆ ಉಂಟಾಗಲೆಂದು ಇಷ್ಟಪಡುತ್ತಾರೆ. ಈ ಆಹುತಿಯು ವರುಣನಿಗೆ ಸೇರಲಿ.

ಮಂತ್ರ—ತ್ವಂನೋ ಅಗ್ನೇ ವರುಣಸ್ಯ ವಿದ್ವಾನ್ ದೇವಸ್ಯ ಹೇಡೋಽವ ಯಾಸಿಸೀಷ್ಠಾಃ । ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾ ದ್ವೇಷಾಗ್ಂಸಿ ಪ್ರಮುಮುಗ್ಧ್ಯಸ್ಮತ್ ಸ್ವಾಹಾ ॥ ಅಗ್ನೀ ವರುಣಾಭ್ಯಾ ಮಿದಂ ನಮಮ ॥

ತಾತ್ಪರ್ಯ—ಎಲೈ ಅಗ್ನಿಯೇ, ನೀನು ಎಲ್ಲವನ್ನೂ ತಿಳಿದವನು. ನಮ್ಮ ಮೇಲಿರುವ ವರುಣ ದೇವರ ಕ್ರೋಧವನ್ನು ಹಿಂತಿರುಗಿಸು. ನೀನು ವಿಶೇಷವಾಗಿ ಯಾಗ ಮಾಡುವವನೂ ವಿಶೇಷವಾಗಿ ಹವಿಸ್ಸನ್ನು ಹೊರುವ ವನೂ, ಅತಿಶಯವಾಗಿ ಪ್ರಕಾಶಿಸುವವನೂ ಆದ್ದರಿಂದ ಪ್ರಪಂಚದಲ್ಲಿರುವ ನಮ್ಮ ಶತ್ರುಗಳ ದ್ವೇಷಕ್ಕೆ ವಿಷಯಗಳಾದ ವಧೆ, ಬಂಧನಾದಿಗಳನ್ನು ನಮ್ಮಿಂದ ದೂರಮಾಡು. ಈ ಆಹುತಿಯು ಅಗ್ನೀ ವರುಣರಿಗೆ ಸೇರಲಿ.

ಮಂತ್ರ—ಸತ್ವಂನೋ ಅಗ್ನೇಽ ವಮೋಭವೋತೀ ನೇದಿಷ್ಠೋ ಅಸ್ಯಾ ಉಷಸೋವ್ಯುಷ್ಟೌ। ಅವಯಕ್ಷ್ವನೋ ವರುಣಗ್ಂ ರರಾಣೋ ವೀಹಿ ಮೃಡೀಕಗ್ಂ ಸುಹವೋನ ಏಧಿ ಸ್ವಾಹಾ॥ ಅಗ್ನೀವರುಣಾಭ್ಯಾಮಿದಂ ನಮಮ॥

ತಾತ್ಪರ್ಯ-ಎಲೈ ಅಗ್ನಿಯೇ, ಮೇಲೆ ಹೇಳಿದ ಗುಣಗಳಿಂದ ಕೂಡಿದ ನೀನು ದೇವತೆಗಳಿಗೆಲ್ಲಾ ಮೊದಲನೆಯುವನು. ನಮ್ಮನ್ನು ಕಾಪಾಡುವುದರಿಂದ ಸದಾ ಹತ್ತಿರನಾಗು. ನಮ್ಮಲ್ಲಿರುವ ವರುಣ ಪಾಶಗಳು ಹಿಂತಿರುಗುವಂತೆ ವರುಣನನ್ನು ಕುರಿತು ಯಜ್ಞ ಮಾಡು. ನಮ್ಮಿಂದ ಕೊಡಲ್ಪಟ್ಟ ಸುಖಕರ ವಾದ ಪುರೋಡಾಶಾದಿಗಳನ್ನು ಭುಜಿಸು. ನಾವು ಮಾಡುವ ಯಜ್ಞಗಳಲ್ಲಿ ಆಹ್ವಾನವನ್ನು ಸ್ವೀಕರಿಸಿ ಬರುವವನಾಗು ಮತ್ತು ನಮ್ಮನ್ನು ಕಾಪಾಡು. ಈ ಹವಿಸ್ಸು ಅಗ್ನಿ ವರುಣರಿಗೆ ಸೇರಲಿ.

ಮಂತ್ರ – ತ್ವಮಗ್ನೇ ಅಯಾಸ್ಯಯಾ ಸನ್ಮನಸಾಹಿತಃ। ಅಯಾಸ್ಸ ಹವ್ಯ ಮೂಹಿಷೇಯಾನೋ ಧೇಹಿ ಭೇಷಜಗ್ಂ ಸ್ವಾಹಾ॥ ಅಗ್ನಯೇ ಅಯಸ ಇದಂ ನಮಮ॥

ತಾತ್ಪರ್ಯ – ಎಲೈ ಅಗ್ನಿಯೇ, ನೀನು ಭಕ್ತರ ಸಮೀಪಕ್ಕೆ ಬರುವ ನಾಗು. ಈ ರೀತಿಯಾದ ನೀನು ನಮ್ಮ ಮನಸ್ಸಿನಿಂದ ಹಿತವಾಗಿ ಅಗ್ನಿಯಾಗಿ ದ್ದೀಯೇ. ನಮ್ಮಿಂದ ಕೊಡಲ್ಪಟ್ಟ ಹವಿಸ್ಸನ್ನು ದೇವತೆಗಳಿಗೆ ಕೊಡುವುದ ಕ್ಕೋಸ್ಕರ ಬರುವವನಾಗು. ಆ ನೀನು ಬಂದು ನಮಗೆ ಔಷಧಿಯನ್ನು ಕೊಡು. ಈ ಆಹುತಿಯು ಆಯಸಾಗ್ನಿಗೆ ಸೇರಲಿ.

ಈ ರೀತಿ ಕುಮಾರನಿಂದ ಹನ್ನೊಂದು ಆಹುತಿಗಳನ್ನು ಹೋಮ ಮಾಡಿಸಿ ಅನೂಯಾಜ ಸಮಿತ್ತನ್ನೂ ಇಧ್ಮಸನ್ನಹನನ್ನೂ ಅಗ್ನಿಯಲ್ಲಿ ಹೋಮ ಮಾಡಿ ಜಯಾದಿಗಳೆಂಬ ಐವತ್ತೆಂಟು ಉಪಹೋಮಗಳನ್ನು ಮಾಡಿ ಲೇಪಕಾರ್ಯವನ್ನು ಬಿಟ್ಟು ಪರಿಧಿ ಪ್ರಹರಣವನ್ನು ಮಾಡದೆ ಅವುಗಳನ್ನು ತೆಗೆದಿರಿಸಿ, ಈ ಕರ್ಮದಲ್ಲಿ ಉಂಟಾಗಿರುವ ಜ್ಞಾತಾ ಜ್ಞಾತಾದಿ ದೋಷಗಳ ಪರಿಹಾರಾರ್ಥವಾಗಿ ಅನಾಜ್ಞಾತಾದಿ ಹೋಮಾದಿಗಳನ್ನು ಮಾಡಿ ಬ್ರಹ್ಮವಿಸರ್ಜನಾಂತ ಪ್ರಯೋಗವನ್ನು (ಅಥವಾ ಪೂರ್ಣಪಾತ್ರೋದಕ ಪ್ರೋಕ್ಷಣಾಂತ ಮಾಡಿ ಬ್ರಹ್ಮವಿಸರ್ಜನೆಯನ್ನು ಮಾತ್ರ ಮಾಡದೆ) ಮುಂದಿನ ಕೆಲಸವನ್ನು ಮಾಡಬೇಕು. ಅಗ್ನಿಗೆ ಪಶ್ಚಿಮದಲ್ಲಿ ಉದಗಗ್ರವಾಗಿ ಕೂರ್ಚೆಯನ್ನು ಇಡಬೇಕು. ಆ ಕೂರ್ಚೆಯಲ್ಲಿ ಮುಂದೆ ಹೇಳುವ ಮಂತ್ರದಿಂದ ಉಪನಯನವನ್ನು ಮಾಡುವ ಆಚಾರ್ಯನು ಕುಳಿತುಕೊಳ್ಳುತ್ತಾನೆ.

ಪ್ರತಿಮಂತ್ರಮೇಕಾದಶಾಜ್ಯಾಹುತೀಃ ಕುಮಾರೇಣ ಹಾವಯಿತ್ವಾ । ಅಪಾಸ್ತಸಮಿಧಮಿತ್ಯಾದಿ ಜಯಾದಿ ಬ್ರಹ್ಮವಿಸರ್ಜನಾಂತೇ । ಅಪರೇಣಾಗ್ನಿಂ ಉದಗಗ್ರಂ ಕೂರ್ಚಂ ನಿದಧಾತಿ ತಸ್ಮಿನ್ ಉತ್ತರೇಣಯಜುಷಾ ಉಪನೇತಾ ಉಪವಿಶತಿ ॥

ಮಂತ್ರ – ರಾಷ್ಟ್ರಭೃದಸ್ಯಾಚಾರ್ಯಾಽಸಂದೀಮಾತ್ವದ್ಯೋಷಂ ।

ತಾತ್ಪರ್ಯ — ಎಲೈ ಕೂರ್ಚವೇ, ದೇಶದ ಅಧಿಪತಿಯಾಗಿದ್ದೀಯೆ. ಮತ್ತು ಪ್ರಶಸ್ತವಾಗಿದ್ದೀಯೆ. ಈ ರೀತಿಯಾದ ನೀನು ಆಚಾರ್ಯರುಗಳ ಆಸನಗಳಾಗಿದ್ದೀಯೆ. ಹೀಗಿರುವ ನಿನ್ನಿಂದ ನಾನು ಬೇರೆಯಾಗುವುದಿಲ್ಲ.

ವಟುವಾದವನು ಆಚಾರ್ಯನಿಗೆ ಕೂರ್ಚೆಯನ್ನು ಉತ್ತರಾಗ್ರ ಅಥವಾ ಪೂರ್ವಾಗ್ರವಾಗಿ ಕೊಡಬೇಕು. ಆ ರೀತಿ ಉತ್ತರ ಅಥವಾ ಪೂರ್ವಾಗ್ರವಾಗಿ ಇಟ್ಟು ಕೂರ್ಚೆಯಲ್ಲಿ ಆಚಾರ್ಯನು "ರಾಷ್ಟ್ರಭೃದಸಿ" ಎಂಬ ಮಂತ್ರದಿಂದ ಕುಳಿತುಕೊಳ್ಳಬೇಕು. ಇಲ್ಲಿ ಸಂಪ್ರದಾಯಾನುಸಾರ ವಿಘ್ನೇಶ್ವರ ಪೂಜೆ ಮಾಡಿ, ವಟುವು ತಂದೆಯಾದ ಆಚಾರ್ಯನ ಎದುರಿಗೆ ಪಶ್ಚಿಮಾಭಿ

ಮುಖವಾಗಿ ಎರಡು ಪಾದಗಳನ್ನು ತೊಳೆದು ವಸ್ತ್ರದಿಂದ ಒರಸಿ ಅರಶಿನ, ಕುಂಕುಮ, ಹೂವು, ಮಂತ್ರಾಕ್ಷತೆಗಳಿಂದ ಪೂಜಿಸಿ ಆ ನೀರನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಂಡು ನಂತರ ತನ್ನ ಬಲಗೈಯಿಂದ ಆಚಾರ್ಯನ ಬಲಗಾಲನ್ನು ಹಿಡಿದುಕೊಂಡು ಹೇಳುತ್ತಾನೆ. ಎಲೈ ಗುರುವೇ! ನನಗೆ ಸಾವಿತ್ರಿಯನ್ನು ಉಪದೇಶಿಸು ಎಂದು. ಅದಕ್ಕೆ ಗುರುವು ವಟುವಿಗೆ ಉಪದೇಶಿಸುತ್ತೇನೆ-ಎಂದು ಹೇಳಿ 'ತತ್ಸವಿತುಃ' ಎಂಬ ಗಾಯತ್ರೀ ಮಂತ್ರವನ್ನು ಮೂರು ಪಾದಗಳಾಗಿಯೂ ಅರ್ಧ ಮಂತ್ರಗಳಾಗಿಯೂ, ಪೂರ್ತಿಯಾಗಿಯೂ, ಮೂರು ಪಾದಗಳ ಮೊದಲಿನಲ್ಲಿಯೂ, ವ್ಯಾಹೃತಿಗಳಿಂದ ಕೂಡಿರುವುದಾಗಿಯೂ ಇರುವ ಗಾಯತ್ರೀ ಮಂತ್ರ ಉಪದೇಶವನ್ನು ಮಾಡುತ್ತಾನೆ.

ಅದ್ಯ........ರ್ಥಂ। ಮಮ ಕುಮಾರಸ್ಯ ಗಾಯತ್ರೀ ಸ್ವೀಕರಣಕಾಲೇ ಮಮ ಗಾಯತ್ರೀ ಪ್ರದಾನಕಾಲೇ ಸಿರ್ವಿಘ್ನತಾ ಸಿದ್ಧ್ಯರ್ಥಂ ಮಹಾಗಣಪತಿ ಪೂಜಾಂ ಕರಿಷ್ಯೇ॥ ಗಣಪತಿ ಪೂಜಾಂ ಕೃತ್ವಾ। ಆಚಾರ್ಯಪಾದೌ ಸಂಪೂಜ್ಯ। "ಸಾವಿತ್ರೀಂ ಭೋ ಅನುಬ್ರೂಹಿ" ತಸ್ಮಾ ಅನ್ವಾಹ।

ಮಂತ್ರ—ಓಂ ಭೂಃ, ತತ್ಸವಿತುರ್ವರೇಣ್ಯಂ। ಓಂ ಭುವಃ, ಭರ್ಗೋ ದೇವಸ್ಯ ಧೀಮಹಿ। ಓಗ್ಂ ಸುವಃ ಧಿಯೋಯೋನಃ ಪ್ರಚೋದಯಾತ್। ಓಂ ಭೂಃ, ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ। ಓಂ ಭುವಃ। ಧಿಯೋಯೋನಃ ಪ್ರಚೋದಯಾತ್। ಓಗ್ಂ, ಸುವಃ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ। ಧಿಯೋಯೋನಃ ಪ್ರಚೋದಯಾತ್॥

ತಾತ್ಪರ್ಯ—ಯಾವ ದೇವನು ನಮ್ಮೆಲ್ಲರ ಧರ್ಮ ವಿಷಯಕವಾದ ಬುದ್ಧಿಗಳನ್ನು ಪ್ರೇರೇಪಿಸುತ್ತಾನೆಯೋ ಮತ್ತು ಯಾವ ದೇವನನ್ನು

ನಾವೆಲ್ಲರೂ ಧ್ಯಾನಿಸುತ್ತೇವೆಯೋ, ಆ ದೇವನಾದ ಸವಿತೃವಿನ ಶ್ರೇಷ್ಠವಾದ, ಪಾಪಗಳನ್ನು ಹೋಗಲಾಡಿಸುವ, ತೇಜೋಮಯ ರೂಪವನ್ನು ನಾವು ಧ್ಯಾನ ಮಾಡುತ್ತೇವೆ. ಈ ರೀತಿ ಆಚಾರ್ಯನು ಗಾಯತ್ರೀ ಉಪದೇಶವನ್ನು ಸಂಪ್ರದಾಯರೀತ್ಯಾ ವಟುವನ್ನು ತನ್ನ ಬಲಗಡೆಯ ತೊಡೆಯಲ್ಲಿ ಕೂರಿಸಿ ಕೊಂಡು ಗಾಯತ್ರಿಯ ಮೂರು ಪಾದಗಳಲ್ಲಿಯೂ ಮೂರು ವ್ಯಾಹೃತಿಗಳನ್ನು ಸೇರಿಸಿ. ಒಂದು ಸಲ ಅರ್ಧ ಋಕ್ಕಿನಲ್ಲಿರುವ ಎರಡು ಪಾದಗಳೂ ಓಂ ಭೂಃ ಎಂಬ ವ್ಯಾಹೃತಿಗಳನ್ನು ಸೇರಿಸಿ ಓಂ ಭುವಃ ಎಂಬ ವ್ಯಾಹೃತಿಯನ್ನು ಮೂರನೇ ಪಾದಕ್ಕೂ ಸೇರಿಸಿ ಎರಡನೆಯ ಸಲವೂ, ಮೂರನೆಯ ಆವೃತ್ತಿಯಲ್ಲಿ ಮೂರನೆಯ ಓಂ ಸುವಃ ವ್ಯಾಹೃತಿಯೊಡನೆ ಪೂರ್ಣಪಾದ ಗಾಯತ್ರಿ ಮಂತ್ರ ವನ್ನು ತೆರೆಯ ಒಳಗೆ ಉಪದೇಶ ಮಾಡಿ ಬ್ರಾಹ್ಮಣರಿಂದ ಆಶೀರ್ವಾದ ಮಾಡಿಸಬೇಕು. ವಟುವು ಅವೃಧಮಸಿ ಎಂಬ ಮಂತ್ರದಿಂದ ತನ್ನ ಎರಡು ತುಟಿಗಳನ್ನು ಎಡಭಾಗದಿಂದ ಬಲಭಾಗದ ಕಿವಿಯವರೆವಿಗೂ ಬಲಗೈಯಿಂದ ಸವರಿಕೊಳ್ಳಬೇಕು.

ಕುಮಾರಃ—ಅವೃಧಮಸೀತಿ ಸ್ವಮುತ್ತರವೋಷ್ಠಮುಪಸ್ಪೃಶತಿ ॥

ಮಂತ್ರ—ಅವೃಧಮಸೌ ಸೌಮ್ಯಪ್ರಾಣಸ್ವಂ ಮೇ ಗೋಪಾಯ ॥

ಶ್ಯಾವಾಂತಾಪರ್ಯಂತಾವೋಷ್ಠಾವುಪಸ್ಪೃಶ್ಯ ಆಚಮೇತ್ ॥

ತಾತ್ಪರ್ಯ—ಈಗ ನಾನು ಸಾವಿತ್ರೀ ಗ್ರಹಣದಿಂದ ಶ್ರೀಮಂತನಾಗಿ ದ್ದೇನೆ. ಎಲೈ ನನಗೆ ಅನುಕೂಲವಾಗಿರುವ ಶರೀರಾಂತರಾತ್ಮನೇ, ಈಗ ತಾನೇ ನನ್ನ ಒಳಗಡೆ ಪ್ರವೇಶಿಸಿರುವ ಸಾವಿತ್ರೀ ಸ್ವರೂಪವಾದ ಧನವನ್ನು ಕಾಪಾಡು. ಹೊರಗಡೆ ಹೋಗದೆ ಇರುವಂತೆ ನಿಲ್ಲಿಸು. ಅನಂತರ ಆಚಮನ ಮಾಡಬೇಕು. ಮುಂದಿನ ಮಂತ್ರದಿಂದ ಎರಡು ಕಿವಿಗಳನ್ನೂ ಮುಟ್ಟಿ ಕೊಳ್ಳಬೇಕು. ನಂತರ ಆಚಮನ ಮಾಡಿಸಬೇಕು.

ಮಂತ್ರ—ಬ್ರಹ್ಮಣ ಆಣೀಸ್ಥಃ ॥ ಕರ್ಣೌ ಸ್ಪೃಶತಿ.

